# ಮುಂದೇನು ರಾಮನ್



ಪ್ರಕಾಶಕರು :

ಪ್ರಗತಿ ಪ್ರಕಟನಾಲಯ, ಬೆಂಗಳೂರು ೯

# ಮುಂದೇನು ರಾಮನ್

ಮೂಲ :
ಷರ್ಲಿ ಎಲ್. ಅರೋರ

ಕನ್ನಡಕ್ಕೆ ಭಾಷಾಂತರಿಸಿದವರು :
ವೈ. ಎನ್. ಕೃಷ್ಣಮೂರ್ತಿ



ಪ್ರಕಾಶಕರು :
ಪ್ರಗತಿ ಪ್ರಕಟನಾಲಯ
ಗಾಂಧಿನಗರ — ಬೆಂಗಳೂರು-9.

# WHAT THEN, RAMAN?

BY

SHIRLEY L. ARORA



WHAT THEN, RAMAN?

*by Shirley L. Arora*

*published by Follett Publishing Co., Chicago*

*Kannada Translation*

*By*

Y. N. KRISHNAMURTHY

*First Edition 2000 Copies*

*October, 1964*

*Price :* *Rs.* 2

*Printed at*

PRAGATI PRINTERS :: BANGALORE-9

# ಈ ಪುಸ್ತಕ ಕುರಿತು....

ಕನ್ನಡದಲ್ಲಿ ಮಕ್ಕಳ ಮಾನಸಿಕ ಮಟ್ಟಕ್ಕೆ ಸರಿಯಾದ ಪುಸ್ತಕಗಳು ಬಹಳ ಕಡಮೆ. ಅವರಿಗೆ ಅರ್ಥವಾಗುವ ರೀತಿಯಲ್ಲಿ, ಅವರ ಮನಸ್ಸಿಗೆ ಹಿಡಿಯುವ ರೀತಿಯಲ್ಲಿ ಇವನ್ನು ಬರೆಯಬೇಕು. ಎಲ್ಲಕ್ಕೂ ಹೆಚ್ಚಾಗಿ ಅವರ ಮನಸ್ಸನ್ನು ಆಕರ್ಷಿಸಲು ಸೂಕ್ತ ಚಿತ್ರಗಳೂ ಇರಬೇಕು. ಈ ಮೂರು ಬೇಡಿಕೆಗಳನ್ನೂ ಈ ಪುಸ್ತಕ 'ಮುಂದೇನು ರಾಮನ್' ಪೂರೈಸುತ್ತದೆ ಎಂದು ನಮ್ರವಾಗಿ ತಿಳಿಸ ಬಿಚ್ಛಿಸುತ್ತೇವೆ.

ಮೊಟ್ಟ ಮೊದಲು ಇಂಗ್ಲೀಷಿನಲ್ಲಿ (ಅಮೆರಿಕದಲ್ಲಿ) ಈ ಪುಸ್ತಕವು ಪ್ರಕಟವಾಗಿ ಲಕ್ಷಗಟ್ಟಲೆ ಪ್ರತಿಗಳು ಖರ್ಚಾದವು. ಹಾನ್ಸ್ ಗುಗೆನೀಂ ಎಂಬ ಹೆಸರಾಂತ ಚಿತ್ರಕಾರರು ಇದಕ್ಕೆ ಚಿತ್ರಗಳನ್ನು ಬರೆದಿದ್ದಾರೆ. ಕನ್ನಡ ಮಕ್ಕಳಿಗೆ ಇವು ಪ್ರಿಯವಾದರೆ ನಮ್ಮ ಶ್ರಮ ಸಾರ್ಥಕವೇ ಸರಿ.

ಪ್ರಕಾಶಕರು




ಶಾಲಾಮಾಸ್ತರು ಮುನುಸ್ವಾಮಿ ಜೇಬಿನಿಂದ ತಮ್ಮ ದಪ್ಪನೆಯ, ಗುಂಡಾದ ಚಿನ್ನದ ಗಡಿಯಾರ ಹೊರತೆಗೆದು ತೋಳಿನ ದೂರಕ್ಕೆ ಇಟ್ಟುಕೊಂಡು ತಮ್ಮ ಕನ್ನಡಕದ ಗಾಜುಗಳ ಕೆಳ ಅರ್ಧದ ಮೂಲಕ ಗಂಟೆಯೆಷ್ಟೆಂದು ನೋಡಲು ತಲೆಯನ್ನು ಸ್ವಲ್ಪ ಹಿಂದಕ್ಕೆ ಎತ್ತಿದರು. ನಾಲ್ಕು ಗಂಟೆಯಾಗಲು ಇನ್ನು ಎರಡೇ ನಿಮಿಷ ಉಳಿದಿದೆ.ಸಂತಸಗೊಂಡು ಮುನುಸ್ವಾಮಿ ತಲೆ ಅಲ್ಲಾಡಿಸಿದರು. ಇಷ್ಟೊಂದು ವರ್ಷಗಳಾದ ಮೇಲೆ ಶಾಲೆ ಬಿಡುವ ಹೊತ್ತನ್ನು ಹೇಳಲು ಅವರಿಗೆ ಗಡಿಯಾರ ಬೇಕಾಗಿಯೇ ಇರಲಿಲ್ಲ.

ಗಡಿಯಾರವನ್ನು ಮತ್ತೆ ಜೇಬಿನಲ್ಲಿಟ್ಟು, ಈ ಸಾರಿ ಕನ್ನಡಕದ ಮೇಲರ್ಧ ದಿಂದ ಕೊಠಡಿಯ ಸುತ್ತ ಒಮ್ಮೆ ಕಣ್ಣು ಹಾಯಿಸಿದರು. ಪದ್ಮಾಸನ ಹಾಕಿ ಕೊಂಡು ನೆಲದಮೇಲೆ ಕುಳಿತಿದ್ದ, ಮೂವತ್ತು ಅಥವಾ ಇನ್ನು ಸ್ವಲ್ಪ ಹೆಚ್ಚು ಮಂದಿ ಮಕ್ಕಳು ತೋರಿಕೆಗೆ ತಮ್ಮ ವ್ಯಾಸಂಗದಲ್ಲಿ ತಲ್ಲೀನರಾಗಿದ್ದರು. ಪ್ರತಿ ಹುಡುಗನೂ ತನ್ನ ಪಕ್ಕದವನಿಗಿಂತ ದೊಡ್ಡ ದನಿಯಲ್ಲಿ ತಾನು ಮಾತನಾಡು ವುದು ಕೇಳುವಂತೆ ಗಟ್ಟಿಯಾಗಿ ಪಾಠಗಳನ್ನು ಹೇಳುತ್ತಿದ್ದಂತೆ ತರಗತಿಯಲ್ಲಿ ಸಾಕಷ್ಟು ಗಲಾಟೆಯಿತ್ತು. ಆದರೆ, ತಾಳಿ–ಅಲ್ಲಿ ಒಂದೇ ಒಂದು ವ್ಯಕ್ತಿ ಮೌನ ವಾಗಿದೆಯಲ್ಲಾ; ಆ ಮೂಲೆಯಲ್ಲಿ ತನ್ನ ಮುಂದೆ ಇದ್ದ ಏನನ್ನೋ ನೋಡುತ್ತ ಜಾಗಿ ಕುಳಿತಿದ್ದ. ಎಂದಿನಂತೆಯೇ–ಮರ ಕಡಿಯುವವನ ಮಗ ರಾಮನ್ ಓದು ತ್ತಿದ್ದ–ಆದರೆ ತನ್ನ ಪಾಠಗಳನ್ನಲ್ಲ! ಮುನುಸ್ವಾಮಿ ಹುಬ್ಬು ಗಂಟಿಕ್ಕಿ ತಲೆ ಅಲ್ಲಾ ಡಿಸಿದರು. ತಮ್ಮ ಕೈಯನ್ನು ಎಂದೂ ಬಿಡದ ಆ ತೋರುಗೋಲನ್ನು ಮೇಜಿನ ಮೇಲೆ ಬಡಿದರು. ಕೂಡಲೇ ಕೊಠಡಿಯಲ್ಲಿ ಸದ್ದು ಮಾತಿನ ನಡುವೆಯೇ ನಿಂತಿತು. ಪ್ರತಿಯೊಬ್ಬರೂ–ರಾಮನ್ ಕೂಡಾ–ಸೆಟೆದು ಕುಳಿತು ಮಾಸ್ತರರತ್ತ ನೋಡಿದರು. ಪೂರ್ತಿ ಒಂದು ಕ್ಷಣ ಕಾದು ಆಮೇಲೆ ಮುನುಸ್ವಾಮಿ ಖಚಿತ ದನಿಯಲ್ಲಿ ಹೇಳಿದರು :

'ಶಾಲೆ ಬಿಟ್ಟಿದೆ.'

ಸದ್ದಿಲ್ಲದೆ ಹುಡುಗರು ಒಬ್ಬರಾದಮೇಲೊಬ್ಬರಂತೆ ಮೇಲೆದ್ದು ಹೊರಕ್ಕೆ ನಡೆದರು. ಅವರೆಲ್ಲಾ ಬಾಗಿಲಿಂದ ಹೊರಕ್ಕೆ ನಡೆದಂತೆ ಕಣ್ಮರೆಯಾದಂತೆ ಮುನು ಸ್ವಾಮಿ ಅವರ ಎಳೆಯ ನೇರವಾದ ಬೆನ್ನನ್ನು ದಿಟ್ಟಿಸಿದರು. ಒಮ್ಮೆ ಹೊರಕ್ಕೆ ನಡೆದರೆ ಮುಗಿಯಿತು, ಹೋ ಎಂದು ಚೀರುತ್ತ ಶಾಲೆಯ ಸುತ್ತಲಿನ ಧೂಳು ತುಂಬಿದ ಬಯಲಿನಲ್ಲಿ ಧಾವಿಸಿ ಕಡಿದಾದ ದಿಬ್ಬವನ್ನು ಹೆಜ್ಜೆ ಹೆಜ್ಜೆಯಾಗಿ ಏರಿ ಮೇಲಿರುವ ರಸ್ತೆಗೋಡುವರು.

'ರಾಮನ್, ಒಂದು ನಿಮಿಷ ನಿಲ್ಲು' ಕೊನೆಯವನಾಗಿ, ಮರ ಕಡಿಯುವ ವನ ಮಗ ಬಾಗಿಲ ಬಳಿಸಾರಿದ್ದಂತೆ ಮುನುಸ್ವಾಮಿ ಕೂಗಿದರು.

ರಾಮನ್ ತಿರುಗಿ ನೋಡಿದ. 'ಸಾರ್ ?'

'ಇಲ್ಲಿ ಬಾ' ಅನಿಶ್ಚಿತನಾಗಿ ಹುಡುಗ ಬಂದ. ಅವನ ಕಣ್ಣುಗಳು ಒಮ್ಮೆ ಮಾಸ್ತರರ ಕೈಲಿದ್ದ ಬೆತ್ತದತ್ತ ದಿಟ್ಟಿಸಿದವು.

'ಈ ಹೊತ್ತು ಏನು ? ಅದ್ಭುತ ಕಥೆಯೊ ? ಪುರಾಣವೊ? ಪದ್ಯವೊ?', ಮಾಸ್ತರರು ಕೇಳಿದರು.

ಲಜ್ಜಾನ್ವಿತನಾಗಿ ರಾಮನ್ ನಕ್ಕು ತಲೆಯನ್ನು ಪಕ್ಕಕ್ಕೆ ಹೊರಳಿಸಿದ. 'ಕಥೆಗಳು, ಸಾರ್. ಪ್ರಾಚೀನ ಭಾರತದ ವೀರರ ಕಥೆಗಳು. ನೋಡಿ!, ಪರಟಿನೊಳಕ್ಕೆ ಕೈಹಾಕಿ ಸವೆದು ಮಾಸಿದ್ದ ಪುಟ್ಟ ಹೊತ್ತಗೆಯೊಂದನ್ನು ಹೊರತೆಗೆದ.

ಮುನುಸ್ವಾಮಿ ಪುಸ್ತಕವನ್ನು ತೆಗೆದುಕೊಂಡು ಅದರ ಪುಟಗಳನ್ನು ತಿರುವಿಹಾಕಿ ತಲೆ ಅಲ್ಲಾಡಿಸಿದರು. ಪುಸ್ತಕವನ್ನು ರಾಮನ್‌ಗೆ ಹಿಂದಿರುಗಿಸಿದರು. 'ಇದು ನಿನಗೆ ಎಲ್ಲಿ ಸಿಕ್ಕಿತು?'

'ಪುಸ್ತಕದಂಗಡಿಯ ತಂಬುಸ್ವಾಮಿಯಿಂದ ನಾನೇ ಕೊಂಡುಕೊಂಡೆ. ಹಬ್ಬದ ದಿನಗಳಲ್ಲಿ ಕೂಡಿಟ್ಟಿದ್ದ ದುಡ್ಡಿನಿಂದ.' – ನೆಟ್ಟಗೆ ಎಳೆಯ ತನ್ನ ಭುಜಗಳನ್ನು ನೇರಗೊಳಿಸಿ ರಾಮನ್ ಹೆಮ್ಮೆಯಿಂದ ಹೇಳಿದ.

'ಅಂದರೆ ಹಬ್ಬಗಳಿಗೆ ಮಿಠಾಯಿಗಳಿಗೆ ಬದಲಾಗಿ ಪುಸ್ತಕಗಳನ್ನು ಕೊಳ್ಳುವುದೇ ನಿನಗೆ ಇಷ್ಟವಲ್ಲವೆ ?'



'ಹೌದು, ಸಾರ್.'

ಕನ್ನಡಕದ ಗಾಜುಗಳ ಮೇಲರ್ಧದ ಮೂಲಕ ಮುನುಸ್ವಾಮಿ ಹುಡುಗನನ್ನು ದಿಟ್ಟಿಸಿ ನೋಡಿದರು. ಪಟ್ಟಣದಿಂದ ಬರದೆ ಕೆರೆಯಾಚೆ ಬೆಟ್ಟಗಳ ನಡುವಣ ಬೇಸಾಯ ಕ್ಷೇತ್ರವೊಂದರಿಂದ ಬರುತ್ತಿದ್ದ ಒಬ್ಬನೇ ಹುಡುಗನಾಗಿದ್ದ ರಾಮನ್. ರಾಮನ್ ಶಾಲೆಗೆ ಹೋಗಲು ,ಹೇಗೆ ಅವಕಾಶ ದೊರೆಯಿತೋ ಮುನುಸ್ವಾಮಿಗೆ ತಿಳಿಯದು. ಸಾಮಾನ್ಯವಾಗಿ ಈ ಹೊಲಗಳ ರೈತ ಕುಟುಂಬಗಳ ಮಕ್ಕಳಿಗೆ ಮನೆಯಲ್ಲೇ ಕೈತುಂಬ ಕೆಲಸವಾದರೂ ಇರುತ್ತಿತ್ತು. ಇಲ್ಲವೆ ಪಟ್ಟಣದಿಂದ ಅವರುಗಳು ತುಂಬಾ ದೂರದಲ್ಲಿದ್ದು ದಿನವೂ ಪಟ್ಟಣಕ್ಕೆ ಬಂದು ಹೋಗುವಂತಿರಲಿಲ್ಲ. ಆದರೆ ರಾಮನ್ ಮೊದಲು ಬಂದಿದ್ದು ಒಂದು ವರ್ಷದ ಹಿಂದೆ. ಹೆಮ್ಮೆಯಿಂದ, ಕಲಿಯುವ ಕಾತರದಿಂದ ಬಂದಿದ್ದ. ದಿನಗಳು ಕಳೆದಂತೆ ಅವನು ಮುನುಸ್ವಾಮಿಯ ಅತ್ಯುತ್ತಮ ವಿದ್ಯಾರ್ಥಿಯಾಗಿದ್ದ. ಆದರೆ ಮುನುಸ್ವಾಮಿ ಈ ವಿಷಯವನ್ನು ಜಾಗರೂಕತೆಯಿಂದ ಮುಚ್ಚಿಟ್ಟಿದ್ದ.

'ರಾಮನ್, ಒಂದು ರೂಪಾಯಿಗೆ ಎಷ್ಟು, ನಯೆಪೈಸೆ?' ಮುನುಸ್ವಾಮಿ ಥಟ್ಟನೆ ಕೇಳಿದರು.

'ಅದೇನು ಸಾರ್? ನೂರು;' ಎಂದು ರಾಮನ್ ಉತ್ತರಿಸಿದ. ಯಾರಿಗಾದರೂ ಗೊತ್ತಿರುವ ವಿಷಯ ಅದು, ಹಳೆಯ ಆಣೆಗಳ ಬದಲು ಪುಟ್ಟ ತಾಮ್ರದ ನಯೇಪೈಸೆಗಳು ಬಂದು ಆಗಲೆ ಹಲವು ತಿಂಗಳುಗಳಾಗಿದ್ದವು.

'ಒಂದು ರೂಪಾಯಿಗೆ ಎಷ್ಟು ಆಣೆಗಳು?'

'ಹದಿನಾರು'–ರಾಮನ್ ಕೂಡಲೆ ಉತ್ತರವಿತ್ತ.

'ಹಾಗಾದರೆ ಯಾರಾದರೂ ನಿನಗೆ ಒಂದು ಆಣೆಯ ಬದಲು ನಯೇಪೈಸೆ ಕೊಟ್ಟರೆ, ಎಷ್ಟುಕೊಡುತ್ತಾರೆ?'

ರಾಮನ್ ನೆಲವನ್ನು ದಿಟ್ಟಿಸಿದ. ಪಾಠಗಳನ್ನು ಬರೆಯುವಾಗ ಮಾಡುವಂತೆ ಮಣ್ಣಿನ ಮೇಲೆ ಅಂಕಿಗಳನ್ನು ರೂಪಿಸಿ ಲೆಕ್ಕ ಹಾಕುವಂತೆ ಪ್ರಯತ್ನಿಸಿ ನೋಡಿದ. ಅದು ಪ್ರಯೋಜನವಾಗಲಿಲ್ಲ. ಕೊನೆಗೆ ತಗ್ಗಿಸಿದಂತೆಯೇ ತಲೆ ಅಲ್ಲಾಡಿಸಿದ.

'ನನಗೆ ಗೊತ್ತಿಲ್ಲ, ಸಾರ್.'

ಆಮೇಲೆ ಒಂದು ನಿಮಿಷ ಸುಮ್ಮನಿದ್ದು ಮುನುಸ್ವಾಮಿ ನಿಧಾನವಾಗಿ

ಹೇಳಿದರು : 'ರಾಮನ್, ನೀನು ಶಾಲೆಯಲ್ಲಿ ತುಂಬಾ ಚೆನ್ನಾಗಿ ಓದುವವರಲ್ಲೊಬ್ಬ.'

ಕತ್ತೆತ್ತಿ ನೋಡದೆಯೇ ರಾಮನ್ ತಲೆ ಅಲ್ಲಾಡಿಸಿದ.

'ಲೆಕ್ಕದಲ್ಲಿ ಏನೇನೂ ಬಾರದಂಥವರಲ್ಲಿ ನೀನೂ ಒಬ್ಬ.'

ರಾಮನ್ ತಲೆ ತೂಗಿದ.

'ಓದುವುದೆಲ್ಲಾ ಸರಿಯೇ. ಆದರೆ'—ಮುನುಸ್ವಾಮಿ ಬೆತ್ತವನ್ನು ಒಮ್ಮೆ ಗೋಡೆಗೆ ಬಡಿದ, ರಾಮನ್ ಬೆಚ್ಚಿದ. 'ಲೆಕ್ಕ ಇಡಲು ಬಾರದಿದ್ದರೆ, ನೀನು ದೊಡ್ಡವನಾದಾಗ ಸೌದೆ ಹೇಗೆ ಮಾರುತ್ತೀಯೆ? ಅಂಗಡಿಯವನು ಸರಿಯಾಗಿ ಚಿಲ್ಲರೆ ಹಿಂದಿರುಗಿಸಿದನೇ ಎಂಬುದು ತಿಳಿಯದಿದ್ದರೆ ಪೇಟೆಯಲ್ಲಿ ನೀನು ಸಾಮಾನುಗಳನ್ನು ಹೇಗೆ ಕೊಳ್ಳುವೆ?'

ರಾಮನ್ ಮಾತಾಡದೆ ನಿಂತಿದ್ದ.

'ನಾಳೆ'—ಮಾಸ್ತರರಾದ ಮುನುಸ್ವಾಮಿ ಘೋಷಿಸಿದರು—'ನೀನು ಮಗ್ಗಿ ಹೇಳಬೇಕು, ರಾಮನ್' ಆಣೆಗಳನ್ನು ನಯೇಪೈಸೆಗೆ, ನಯೇಪೈಸೆಯನ್ನು ಮತ್ತೆ ಆಣೆಗಳಿಗೆ ಪರಿವರ್ತಿಸುವುದು ನಿನಗೆ ತಿಳಿಯುವುದು. ನೀನು ಹೇಳದಿದ್ದರೆ —ಅವರು ಮಾತು ಮುಂದುವರಿಸಲಿಲ್ಲ, ಬೆತ್ತ ಹಿಡಿದಿದ್ದ ಅವರ ಕೈ ಸ್ವಲ್ಪ ಅದುರಿತು.

ಆಗಬಹುದಾದ ಪರಿಣಾಮವನ್ನು ಊಹಿಸಿ ರಾಮನ್ ಕಷ್ಟದಿಂದ ಉಗುಳು ನುಂಗಿಕೊಂಡು ಬೆತ್ತವನ್ನು ನೋಡಿದ. ಗೌರವ ಸೂಚಕವಾಗಿ ಒಂದು ಕೈಯನ್ನು ಹಣೆಗೆ ತಾಕಿಸಿ ಪುಟ್ಟ ಪುಸ್ತಕವನ್ನು ಮತ್ತೆ ಷರಟಿನೊಳಕ್ಕೆ ಹಾಕಿ ಅವನು ಹೊರಡಲನುವಾದ. ಹೊರಗೆ ಬಂದೊಡನೆ ಓಡಲಾರಂಭಿಸಿ ಬಯಲನ್ನು ನೆಗೆಯುತ್ತ ದಾಟಿ ದಿಣ್ಣೆಯನ್ನೇರಿ ರಸ್ತೆಗೆ ನಡೆದ. ಅವನು ಹಿಂದಿರುಗಿ ನೋಡಲಿಲ್ಲ. ಮಾಸ್ತರು ಮುನುಸ್ವಾಮಿ ಕೈಯಲ್ಲಿ ಬೆತ್ತ ಹಿಡಿದಂತೆಯೇ ಬಾಗಿಲಿಗೆ ಬಂದು ತನ್ನನ್ನೇ ನೋಡುತ್ತಿದ್ದುದನ್ನು, ಅವರ ಮುಖದಲ್ಲಿ ಕಿರುನಗೆ ಮೂಡಿದುದನ್ನು ರಾಮನ್ ನೋಡಲಿಲ್ಲ.

ಉಳಿದ ಹುಡುಗರೆಲ್ಲಾ ಆಗಲೆ ಹೊರಟುಹೋಗಿದ್ದರು. ಆದರೆ ರಾಮನ್ ಅದನ್ನು ಗಮನಕ್ಕೆ ತಂದುಕೊಳ್ಳಲಿಲ್ಲ. ಅವರ ಸಂಗ ಅವನಿಗೆ ಬೇಕಾಗಿರಲಿಲ್ಲ. ಒಂದು ವರ್ಷದ ಹಿಂದೆ ಅವನು ಶಾಲೆಗೆ ಸೇರಿದ ಹೊಸಬರಲ್ಲಿ ಬೇರೆ ಹುಡು

ಗರು ಕೆರೆಯ ಪಕ್ಕದಲ್ಲಿ ತಮ್ಮೊಡನೆ ಆಟವಾಡಲು ಸೇರುವಂತೆ ಪ್ರತಿದಿನ ಅವ ನನ್ನು ಕರೆಯುತ್ತಿದ್ದರು. ಆದರೆ ಮನೆಗೆಲಸ ಮುಗಿಸಿ ಇನ್ನೂ ದಿನದ ಬೆಳಕಿ ದ್ದಂತೆಯೇ ಓದಿಗೂ ಸ್ವಲ್ಪ ಸಮಯ ದೊರಕಿಸಿಕೊಳ್ಳಲು ರಾಮನ್ ಯಾವಾ ಗಲೂ ಈ ಕರೆಯನ್ನು ನಿರಾಕರಿಸುತ್ತಿದ್ದ. ಕೆಲಕಾಲ ಕಳೆದಮೇಲೆ ಹುಡುಗರು ಅವನನ್ನು ಕರೆಯುವ ಗೋಜಿಗೇ ಹೋಗುತ್ತಿರಲಿಲ್ಲ. ಆದರೆ ಆಮೇಲೆ ಒಮ್ಮೊಮ್ಮೆ ರಾಮನ್ ಅವರು ತನ್ನನ್ನು ಕರೆಯಬಾರದೇ ಎಂದುಕೊಳ್ಳುತ್ತಿದ್ದ; ಆಹ್ವಾನವಿಲ್ಲದೆ ಅವರೊಡನೆ ಸೇರಲು ಅವನಿಗೆ ಸಂಕೋಚ. ಆದರೆ ಈ ಹೊತ್ತು ಅದೆಲ್ಲಾ ಇಲ್ಲದಿದ್ದರೂ ಸರಿಯೇ. ಈ ದಿನ ಅವನ ಬಳಿ ಪುಸ್ತಕವಿತ್ತು. ನೆಗೆ ಯುತ್ತ ದಿಣ್ಣೆಯನ್ನು ಏರಿಹೋದಂತೆ ಪುಸ್ತಕ ಅವನ ಕೈಗೆ ತಗಲುತ್ತಿತ್ತು.

ಶಾಲೆಯ ರಸ್ತೆ ಕಡಿದಾದ ಅಂಗಡಿಬೀದಿಯನ್ನು ಸೇರುವವರೆಗೆ ರಾಮನ್ ಆ ರಸ್ತೆಯಲ್ಲಿ ಸರಸರನೆ ನಡೆದು ಹೋದ. ರಸ್ತೆಯ ಕೊನೆಯಲ್ಲಿ ತಿರುಗಿದ; ಆದರೆ ಅದಕ್ಕೆ ಮೊದಲೇ ಅವನು ಓಡುವುದನ್ನು ನಿಲ್ಲಿಸಿ ನಿಧಾನವಾಗಿ ನಡೆ ಯುತ್ತ ಗಟ್ಟಿಯಾಗಿ ಉಸಿರಾಡುತ್ತಿದ್ದ. ಕೊನೆಗೆ ಅವನು ಮಟ್ಟಸವಾದ ನೆಲ ತಲಪಿದಾಗ ರಸ್ತೆ ಪಕ್ಕದಲ್ಲಿ ವಿರಮಿಸಲು ಕುಳಿತು ಮೂಗನ್ನು ಕೆರೆದುಕೊಂಡ; ಓಡುವಾಗ ನುಂಗಿದ ತಣ್ಣನೆಯ ಗಾಳಿ ಮೂಗಿಗೆ ಕಚಕುಳಿ ಇಟ್ಟಂತಾಗಿತ್ತು.

ಮಧ್ಯಾಹ್ನ ಸಾಕಷ್ಟು ಚಳಿಯಾಗಿಯೇ ಇತ್ತು. ನೈಋತ್ಯ ದಿಕ್ಕಿನಲ್ಲಿ ಮೋಡಗಳು ಕವಿಯುತ್ತಿದ್ದು ರಾತ್ರಿ ಮಳೆಬರುವ ಸೂಚನೆಯಿತ್ತು. ರಾಮ ನ್‌ನ ತಲೆಯ ಮೇಲೆ ಬಹು ಎತ್ತರದಲ್ಲಿ ಗಾಳಿ ನೀಲಿಬಣ್ಣದ ಗೋಂದಿನ ಮರಗಳ ಉದ್ದನೆ ಎಲೆಗಳ ಮೂಲಕ ಸುಯ್‌ಗುಟ್ಟುತ್ತಿತ್ತು. ಇಳಿಸಂಜೆ ಬಿಸಿ ಲಿನ ಕಾವನ್ನು ಅಡಗಿಸಿ ರಸ್ತೆಯಲ್ಲಿ ಉದ್ದನೆಯ ನೆರಳುಗಳು ಚಾಚಿದ್ದುವು.

ಕುಳಿತು ವಿಶ್ರಮಿಸಿಕೊಳ್ಳುತ್ತಿದ್ದಂತೆ ರಾಮನ್ ಮೆಲುದನಿಯಲ್ಲಿ ಮಗ್ಗಿ ಹೇಳಲು ಪ್ರಯತ್ನಿಸಿದ. ನೂರು ನಯೇಪೈಸೆಗೆ ಒಂದು ರೂಪಾಯಿ. ಒಂದು ರೂಪಾಯಿಗೆ ಹದಿನಾರಾಣೆ. ಇಪ್ಪತ್ತೈದು ನಯೇಪೈಸೆಗೆ ಒಂದು ಪಾವಲಿ. ನಾಲ್ಕಾಣೆ ಒಂದು ಪಾವಲಿ. ಅಂದರೆ ಒಂದಾಣೆಗೆ—ಥೂ ಎಂದು ಅವನು ನಿಲ್ಲಿಸಿಬಿಟ್ಟ. ಇದೆಲ್ಲಾ ಎಷ್ಟು ಕ್ಲಿಷ್ಟ! ಹೆಚ್ಚು ಸುಲಭವೆಂದು ಈ ಹೊಸ ನಾಣ್ಯ ಬಂತು; ಆದರೆ ಹಳೆಯದರಿಂದ ಹೊಸದಕ್ಕೆ ಪರಿವರ್ತಿಸುವುದನ್ನು ಕಲಿ ಯುವುದು ಕಷ್ಟವೇ.

ರಾಮನ್ ಒಂದು ಮರದರೆಂಬೆಯ ತುಂಡನ್ನು ಎತ್ತಿಕೊಂಡು ನೆಲದ ಮೇಲೆ ಇಪ್ಪತ್ತೈದು ಸಣ್ಣಗೆರೆಗಳನ್ನು ಹಾಕಿದ. ಆಮೇಲೆ ಅವನ್ನು ನಾಲ್ಕು ಸಮಾನ ಗುಂಪುಗಳಾಗಿ ವಿಂಗಡಿಸಲು ಪ್ರಯತ್ನಿಸಿದ. ಆದರೆ ಒಂದು ಗೆರೆ ಹೆಚ್ಚಾಗಿ ಉಳಿದುಕೊಂಡಿತು; ಅದನ್ನು ಏನು ಮಾಡಬೇಕೋ ತಿಳಿಯಲಿಲ್ಲ. ಬೇಸತ್ತು ಅವನು ರೆಂಬೆಯ ತುಂಡನ್ನು ಕೆಳಕ್ಕೆಸೆದು ಹಿಮ್ಮಡಿಯಮೇಲೆ ಹಿಂದೆ ಕುಳಿತ.

ಎತ್ತಿನ ಗಾಡಿಯೊಂದು ವೇಗವಾಗಿ ಬಂದು ಗುಡ್ಡವನ್ನು ಇಳಿಯುತ್ತ ಸಾಗಿದ್ದಂತೆ ಅವರ ಮರದ ಚಕ್ರಗಳಿಗೆ ಮರದ ಹಿಡಿತ (ಬ್ರೇಕ್) ತಗಲಿ ಕರ್ಕಶ ಶಬ್ದ ಮಾಡಿತು. ಗಾಡಿಹೊಡೆಯುತ್ತಿದ್ದವನತ್ತ ರಾಮನ್ ಕೈಯಾಡಿಸಿದ; ಅವನೂ ಪ್ರತಿವಂದಿಸಿದ. ರಾಮನ್ ಎದ್ದು ರಸ್ತೆಯ ಅಂಚಿನಲ್ಲೇ ನಡೆಯುತ್ತ ಮುಂದೆಸಾಗಿದ. ಗಟ್ಟಿಯಾದ ಕಾಂಕ್ರೀಟ್ ಫುಟ್‌ಪಾತಿಗಿಂತ ಅವನ ಬರಿಗಾಲಿಗೆ ಧೂಳು ತುಂಬಿದ ರಸ್ತೆಯಂಚೇ ಉತ್ತಮವೆನಿಸುತ್ತಿತ್ತು.

ಆಚೆ ಕಡೆ ರಸ್ತೆಯ ಕೊನೆಯಲ್ಲಿ ಕಟ್ಟಕಡೆಯವಳಾಗಿ ಕುಳಿತಿದ್ದ ತರಕಾರಿ ಮಾರುವವಳು ಆದಿನ ಮಾರಾಟವಾಗದೆ ಉಳಿದಿದ್ದ ಕೆಂಪುಮೂಲಂಗಿ ಮತ್ತು ಬೀಟ್‌ಗೆಣಸನ್ನು ಬುಟ್ಟಿಗೆ ತುಂಬಿಡುತ್ತಿದ್ದಳು. ರಾಮನ್‌ನನ್ನು ಕಂಡು ಅವಳು ಕೂಗಿ ಹೇಳಿದಳು: 'ನಿಮ್ಮಮ್ಮ ಮನೆಗೆ ಹೋದಳು. ಮಧ್ಯಾಹ್ನವೇ ಅವಳ ಬಳಿಯಿದ್ದ ತರಕಾರಿಯೆಲ್ಲ ಮಾರಾಟವಾಯಿತು, ಅವಳ ಅದೃಷ್ಟ.'

ರಾಮನ್ ತಲೆ ಅಲ್ಲಾಡಿಸಿ ಕೈಬೀಸಿ ಮುನ್ನಡೆದ. ತರಕಾರಿಯೆಲ್ಲ ಮಾರಾಟವಾಗಿ ಹೋಗಿದ್ದರೆ ರಾತ್ರಿ ಒಳ್ಳೆ ಊಟವಿರುತ್ತದೆ. ಬೇಕಾದಷ್ಟು ಅನ್ನ ಹುಳಿ ಅಥವಾ ಅದರ ಜತೆಗೆ ಮೆಣಸಿನ ಸಾರು. ಅವನಿಗೆ ಹಸಿವಾಗಿತ್ತು. ಆದರೂ ಮನೆಗೆ ಹೋಗುವ ಅವಸರವಿರಲಿಲ್ಲ. ತನ್ನ ತಂದೆ ಇನ್ನೂ ವಾಪಸು ಬಂದಿರುವುದಿಲ್ಲ; ತಂದೆ ಬರುವವರೆಗೆ ಯಾರೂ ಊಟಮಾಡುವಂತಿಲ್ಲ.

ರಾಮನ್ ಅಂಗಡಿಬೀದಿ ದಾಟಿ ಮುಂದೆ ಬಂದಿದ್ದ. ಆ ಜನಗಳ ಮಾತುಕತೆ, ಬಿಸಿ ಎಣ್ಣೆ ಮತ್ತು ಮಸಾಲೆಯ ವಾಸನೆ ಎಲ್ಲಾ ದಾಟಿ ಮುಂದೆ ಬಂದಿದ್ದ. ರಸ್ತೆ ಇನ್ನು ಏರುತ್ತಲೇ ಇತ್ತು: ಆದರೆ ಈವರೆಗಿದ್ದಷ್ಟು ಕಡಿದಾಗಿರಲಿಲ್ಲ. ರಸ್ತೆಯಂಚಿನ ಫುಟ್‌ಪಾತ್ ಇನ್ನೂ ಇರಲಿಲ್ಲ: ಒರಟಾದ ಕಲ್ಲುಗುಂಡುಗಳಿದ್ದವು. ಒಂದೆಡೆ ರಸ್ತೆ ಅಗಲವಾಗಿ ತಿರುಗುವಲ್ಲಿ ರಾಮನ್ ಸ್ವಲ್ಪ

ನಿಂತ, ಹಾಗೆಯೇ ಬಲಗಡೆಯಿದ್ದ ಹಚ್ಚನೆಯ ಇಳಿಜಾರನ್ನು ಕೆಂಪು ಹೆಂಚಿನ ಚಾವಣಿಗಳಾಚೆ ಮರಗಳ ಮರೆಯಲ್ಲಿದ್ದ ಕೆರೆಯ ನೀರನ್ನು ನೋಡಿದ. ಕೆಳಗಡೆಯಿಂದ ಧ್ವನಿಗಳು ಮೆಲ್ಲನೆ ಕೇಳಿಬರುತ್ತಿದ್ದವು; ಮಧ್ಯೆ ಮಧ್ಯೆ ಗೊಳ್ಳನೆ ನಗು ಕೇಳಿಸುತ್ತಿತ್ತು.ಆ ದನಿಗಳು ಯಾರವೆಂದು ರಾಮನ್‌ಗೆ ನೋಡಲಾಗಲಿಲ್ಲ.ಆದರೆ ಅವು ಯಾರವೆಂದು ಊಹಿಸಬಲ್ಲವನಾಗಿದ್ದ–ಸಾಲ್ವಾರಿ, ಮುತ್ತು ಮತ್ತು ಇತರ ಶಾಲೆ ಹುಡುಗರದು. ಕೆರೆಯ ಕೆಸರು ನೀರಿನಲ್ಲಿ ಕಪ್ಪೆಗಳಿಗಾಗಿ ಅರಸುತ್ತ ಹೋದವರು. ರಾಮನ್ ಈ ಧ್ವನಿಗಳಿಗೆ ಬೆನ್ನು ತಿರುಗಿಸಿ ಬೆಟ್ಟವನ್ನೇರಿ ರಸ್ತೆಯಲ್ಲಿ ಮುಂದೆ ಸಾಗಿದ್ದ.

ಬೆಟ್ಟದ ತುದಿಯಲ್ಲಿ ಎಡಕ್ಕೆ ಒಂದು ಹಾದಿ. ರಾಮನ್ ಪಕ್ಕಕ್ಕೆ ತಿರುಗಿ ಆ ಹಾದಿ ಹಿಡಿದ. ಅದೊಂದು ಕಿರಿದಾದ ಹಾದಿ; ಅಲ್ಲಿ ತುಂಬಿದ್ದ ಧೂಳು ರಾಮನ್‌ನ ಬರಿಗಾಲ ಬೆರಳುಗಳ ನಡುವೆ ಅಂಟಿಕೊಳ್ಳುತ್ತಿತ್ತು. ಬೆಟ್ಟದ ಜನ ಈ ದಾರಿಯನ್ನು ಬೆಟ್ಟದ ತುದಿಯ ದಾರಿ ಎಂದು ಕರೆಯುತ್ತಿದ್ದರು. ಅದು ನಿಜವಾಗಿತ್ತು; ಈ ಹಾದಿಯನ್ನು ಬೆಟ್ಟದಲ್ಲೆ ಕಡಿಯಲಾಗಿತ್ತು. ಅದರ ಕೊನೆಯಿಂದ ಕೆಳಕ್ಕೆ ಇಳಿಜಾರುಗಳು ನಿರಾತಂಕವಾಗಿ ಸಾಗಿ ಕೆಳಗಿನ ಮೈದಾನವನ್ನು ಮುಟ್ಟುತ್ತಿದ್ದವು. ಕಣ್ಣು ಹಾಯುವವರೆಗೂ ಮೈದಾನ; ನಡುವೆ ಕೃಷಿಮಾಡಿದ ಕೆಂಬಣ್ಣದ ಚಚ್ಚೌಕನೆಯ ಜಮೀನುಗಳು; ಅಚ್ಚ ಹಸಿರಾದ ಬತ್ತದ ಗದ್ದೆಗಳು; ಮಳೆಬಂದು ನಿಂತ ನೀಲಿಬಣ್ಣದ ನೀರಿನ ಸರಸ್ಸುಗಳು. ರಾಮನ್ ನಿಂತಿದ್ದ ಹಾದಿಗೂ, ಕೆಳಗಿನ ಮೈದಾನಕ್ಕೂ ನಡುವೆ ಮೋಡಗಳು ತೇಲಾಡುತ್ತಿದ್ದವು; ಅವು ಕೆಳಗಿನ ಪ್ರದೇಶದ ಮೇಲೆ ರೂಪಿಸಿದ ಕಪ್ಪನೆಯ ಛಾಯೆಯನ್ನು ರಾಮನ್ ಮೇಲಿನಿಂದ ನೋಡಬಹುದಾಗಿತ್ತು.

ಬೆಟ್ಟದ ತುದಿಯ ದಾರಿಯಿಂದ ಮೇಲುಗಡೆ ಶಿಖರದ ಮೇಲೆ ನಿಂತಿದ್ದ ಮರ್ಕಿನ್ ಬಂಗಲೆಗಳೊಂದರಲ್ಲಿ ಜೀವನ ಹೇಗಿರುತ್ತದೋ ಎಂದು ರಾಮನ್ ಎಂದಿನಂತೆ ಈದಿನವೂ ಯೋಚಿಸಿದ. ಕಿಟಕಿಗಳ ಮೂಲಕ-ದಿನವಿಡೀ ಬೆಳಗಿನಜಾವದಿಂದ ಸೂರ್ಯಾಸ್ತಮಯವಾಗಿ ರಾತ್ರಿಯಲ್ಲೂ ಮೈದಾನವನ್ನು ವೀಕ್ಷಿಸಬಹುದು. ರಾತ್ರಿ ಕೆಳಗಡೆ ಕತ್ತಲೆಯಲ್ಲಿ ಅಲ್ಲಲ್ಲಿ ಮೈದಾನದ ಹಳ್ಳಿಗಳ ದೀಪಗಳ ಮಿನುಗುತ್ತಿದ್ದವು; ದೊಡ್ಡ ಪಟ್ಟಣಗಳ ದೀಪಗಳು ಹೆಚ್ಚಿಗೆ ಪ್ರಕಾಶಿಸುತ್ತಿದ್ದವು. ಇಂಥ ಬಂಗಲೆಗಳಲ್ಲಿ ವಾಸಿಸುವ ಮರ್ಕಿನ್ ಜನರನ್ನು ಕಂಡಾಗ ಅವನಿಗೆ ಅದೆಂಥ

ಈರ್ಷ್ಯೆ! ಆದರೆ ವರ್ಷದಲ್ಲಿ ಬಹುಕಾಲ ಈ ಬಂಗಲೆಗಳು ಖಾಲಿಯಾಗಿರುತ್ತಿದ್ದವು; ಬಾಗಿಲಿಗೆ ಬೀಗ ಹಾಕಿರುತ್ತಿತ್ತು; ಕಿಟಕಿಗಳೆಲ್ಲಾ ಮುಚ್ಚಿರುತ್ತಿದ್ದವು. ಹಿಂಗಾರು, ಮುಂಗಾರು ಕಾಲಗಳಿಗೆ ನಡುವೆ ಎರಡು—ಮೂರು ತಿಂಗಳ ಬೆಟ್ಟದ ದಿನಗಳ ಅವಧಿಯಲ್ಲಷ್ಟೇ ಮರ್ಕಿನ್ ಮಂದಿ ಮೈದಾನಗಳಲ್ಲಿನ ತಮ್ಮ ಮನೆಗಳು, ಶಾಲೆಗಳು, ಕಚೇರಿಗಳನ್ನು ಬಿಟ್ಟು ಬೇಸಗೆಯ ಧಗೆಯನ್ನು ತಪ್ಪಿಸಿಕೊಳ್ಳಲು ಬೆಟ್ಟದ ಮೇಲಕ್ಕೆ ಬರುತ್ತಿದ್ದರು.

ಮರ್ಕಿನ್ ಕುಟುಂಬದವರು ಕಪ್ಪು ಕಡಲಿನಾಚೆಯ ನಾಡಿನಿಂದ ಭಾರತಕ್ಕೆ ಬಂದಿದ್ದರು. ಶಾಲಾಮಾಸ್ತರು ಮುನುಸ್ವಾಮಿ ಆ ನಾಡನ್ನು ತಮ್ಮ ಹುಷಾರಾದ ಖಚಿತ ದನಿಯಲ್ಲಿ ಅಮೆರಿಕ ಎಂದು ಕರೆದಿದ್ದರು.ಆದರೆ ರಾಮನ್ ಮತ್ತು ಇತರ ಗಿರಿಜನರಿಗೆ ಈ ವಿಚಿತ್ರರಾದ, ಪೇಲವವರ್ಣದ, ನಿಧಾನವಾದ ಮೆಲು ದನಿಯ ಜನ ಮರ್ಕಿನ್ ಮಂದಿ ಆಗಿದ್ದರು. ಅವರುಗಳು ಬೆಟ್ಟಕ್ಕೆ ಬಂದಾಗ ಅದು ವರ್ಷದ ಅತ್ಯುತ್ತಮ ಕಾಲವಾಗಿರುತ್ತಿತ್ತು; ಏಕೆಂದರೆ ಆಗ ಎಲ್ಲರಿಗೂ ಕೆಲಸವಿರುತ್ತಿತ್ತು; ಯಾರೂ ಉಪವಾಸವಿರಬೇಕಾಗಿರಲಿಲ್ಲ.ರಾಮನ್‌ನ ತಾಯಿ ಪ್ರತಿದಿನ ತನ್ನ ತರಕಾರಿಯೆಲ್ಲವನ್ನೂ ಮಾರಾಟಮಾಡುತ್ತಿದ್ದಳು; ರಾಮನ್ ತಂದೆ ಹಲವು ಗಾಡಿ ಸೌದೆ ಮಾರುತ್ತಿದ್ದ; ರಾಮನ್, ಅವನ ಸೋದರಿ ವಾಸಂತಿಗೆ ಕೂಡಾ ಅವರು ಆರಿಸಿದ ಅಣಬೆ ಮತ್ತು ಬೆಂಕಿ ಹೊತ್ತಿಸಲು ಬಳಸುವ ಪೈನ್ ಶಂಕುಗಳಿಗೆ ಒಳ್ಳೇ ಗಿರಾಕಿ ಸಿಕ್ಕುತ್ತಿತ್ತು. ರಾಮನ್‌ಗೆ ಈಗಾಗಲೆ ತಿಳಿದಿತ್ತು; ಮುಂಗಾರು ಮಳೆಗಳು ಶುರುವಾಗಿ ಅನೇಕ ಮರ್ಕಿನ್ ಮಂದಿ ಈಗಾಗಲೆ ಬೆಟ್ಟಗಳನ್ನು ಬಿಟ್ಟು ಮೈದಾನ ಪ್ರದೇಶಗಳಿಗೆ ಹಿಂದಿರುಗಿದ್ದರು.ಕೆಲವು ಬಂಗಲೆಗಳಲ್ಲಿ ಮಾತ್ರ ಇನ್ನೂ ಜನ ಇದ್ದರು; ಆ ಮನೆಗಳೂ ಇಷ್ಟರಲ್ಲೇ ಖಾಲಿಯಾಗುವವು.

ರಸ್ತೆಯಲ್ಲಿ ಒಂದು ಮೊನಚಾದ ತಿರುವಿನ ಬಳಿಗೆ ಬಂದಿದ್ದ ರಾಮನ್. ಅಲ್ಲಿ ಮೇಲಿನ ಬಂಡೆಯ ಮುಖವೊಂದರಿಂದ ಚಾಚುಬಂಡೆಯೊಂದು ಮುಂದಕ್ಕೆ ಚಾಚಿ ನಿಂತಿತ್ತು. ಈ ಭಾಗದಲ್ಲಿ ಬಂಡೆಯ ಪದರ ಅಷ್ಟೊಂದು ಕಡಿದಾಗಿರಲಿಲ್ಲ; ಅಲ್ಲಲ್ಲಿ ಬಿರುಕುಗಳಿದ್ದವು. ಈ ಜಾಗದಲ್ಲಿ ಯಾವ ಗಿಡಗಳೂ ಬೆಳೆಯುತ್ತಿರಲಿಲ್ಲ. ಬಂಡೆಯ ಮೇಲ್ಭಾಗದಲ್ಲಿ ತಟ್ಟೆಯಾಕಾರದ ಜಾಗವೊಂದಿತ್ತು. ರಾಮನ್ ಹಾದಿಯನ್ನು ಬಿಟ್ಟು ಈ ಬಂಡೆಯನ್ನೇರಲಾರಂಭಿಸಿದ; ಒಂದೊಂದು

ಬಿರುಕಿಗೂ ಕಾಲಿಟ್ಟು ಎಚ್ಚರಿಕೆಯಿಂದ ಮೇಲೇರಲಾರಂಭಿಸಿದ. ಕ್ಷಣಮಾತ್ರದಲ್ಲಿ ಅವನು ಚಾಚುಬಂಡೆಯ ಮೇಲಿದ್ದ; ಅಲ್ಲಿ ಒಬ್ಬರು ಕೂಡಲು ಮಾತ್ರ ಸಾಕಾದಷ್ಟು ಜಾಗ ಇತ್ತು. ಒಮ್ಮೆ ನಿಟ್ಟುಸಿರಿಟ್ಟು ಅವನು ಕುಳಿತು ಹಿಂದಿದ್ದ ಬಂಡೆಗೆ ಒರಗಿಕೊಂಡು ಕಣ್ಣು ಮುಚ್ಚಿದ. ಮರುಕ್ಷಣವೇ ಮತ್ತೆ ಕಣ್ಣುತೆಗೆದ. ಇನ್ನೂ ಸಮಯ ಉಳಿದಿತ್ತು. ಸೂರ್ಯ ಆಗಲೆ ಮುಳುಗುತ್ತಿದ್ದ. ರಾಮನ್ ಆರಾಮವಾಗಿ ಒರಗಿ ಕುಳಿತು ಅಂಗಿಯೊಳಕ್ಕೆ ಕೈಹಾಕಿ ಆ ಪುಟ್ಟ ಪುಸ್ತಕವನ್ನು ಹೊರತೆಗೆದ; ಶಾಲಾಮಾಸ್ತರು ಮುನುಸ್ವಾಮಿ ಬೆತ್ತದಿಂದ ಮೇಜು ಬಡಿದಾಗ ನಿಲ್ಲಿಸಿದ್ದಲ್ಲಿ ನಿಂತ ಕಥೆಯನ್ನು ಮುಂದಕ್ಕೆ ಓದಲಾರಂಭಿಸಿದ.



# ೧

ರಾಮನ್ ಪುಸ್ತಕದ ಕೊನೆಯ ಹಾಳೆ ತಿರುವಿಹಾಕುವ ವೇಳೆಗೆ ದಿಗಂತದಲ್ಲಿ ಸೂರ್ಯ ಆಗಲೆ ಸ್ವಲ್ಪ ಭಾಗ ಕಾಣದಾಗಿದ್ದ. ರಾಮನ್ ಒಮ್ಮೆ ನಿಟ್ಟುಸಿರಿಟ್ಟು ಎದ್ದು ನಿಂತು ಕೆಳಗಿನ ಮಬ್ಬುಕವಿದ ವಿಶಾಲವಾದ ಮೈದಾನವನ್ನು ಅವಲೋಕಿಸಿದ. ಮಳೆನೀರಿನ ಹೊಂಡಗಳು, ಆಗಸದ ಮೋಡಗಳು ಈಗ ಕೆಂಪು-ಹೊಂಬಣ್ಣಗಳಿಂದ ತುಂಬಿದ್ದವು.ಎಡಭಾಗಕ್ಕೆ ಇಳಿಜಾರಿನಲ್ಲಿ ಸೂರ್ಯಕಿರಣಗಳಿಂದ ಮರೆಯಾಗಿದ್ದ ಪ್ರದೇಶದಲ್ಲಿ ಉದ್ದುದ್ದನೆಯ ನೆರಳುಗಳು ಮೂಡುತ್ತಿದ್ದವು. ರಾಮನ್ ಒಂದು ಕ್ಷಣ ಹಾಗೇ ಕುಳಿತು ಓರೆನೋಟದಿಂದ ದೃಷ್ಟಿಸಿದಾಗ ಕೆಳಗಣ ಕೆಂಪು ಮತ್ತು ಹಸಿರು ಬಯಲುಗಳು ಒಂದುಗೂಡಿ ತೇಲಿದಂತೆ ಕಂಡವು. ತಾನು ಈಗತಾನೆ ಓದಿದ್ದ ಯುದ್ಧ ನಡೆದಿದ್ದುದು ಇಂಥ ಒಂದು ಬಯಲು ಪ್ರದೇಶದಲ್ಲೇ. ಶಂಖ-ಕೊಂಬು-ಕಹಳೆಗಳ ಉದ್ಘೋಷದ ನಡುವೆ, ಭೇರಿಯ ನಿನಾದದ ನಡುವೆ ಯೋಧರ ಸೇನೆಗಳು ಆನೆಗಳನ್ನೋ, ಕುದುರೆಗಳನ್ನೋ, ವೇಗವಾಗಿ ಓಡುವ ರಥಗಳನ್ನೋ ಏರಿ ಬಯಲಿನಲ್ಲಿ ಧಾವಿಸಿ ಬಂದು ಕಾದಾಡಿದರು. ಯೋಧರು ಬಿಟ್ಟ ಬಾಣಗಳಿಂದ ಆಗಸವು ತುಂಬಿತ್ತು-ಮಿಡಿತೆಗಳ ತಂಡಗಳಂತೆ, ಕದನದ ನಡುವೆ ಇಬ್ಬರು ಮಹಾ ಯೋಧರಾದ ಅರ್ಜುನ ಮತ್ತು ಭೀಷ್ಮರು ಶ್ವೇತಾಶ್ವಗಳಿಂದ ಎಳೆಯಲ್ಪಟ್ಟ ರಥಗಳಲ್ಲಿ ಕುಳಿತು ಹೋರಾಡಿದ್ದರು.

ಚಪ್ಪಲಿ ಕಾಲಿನ ನಡಿಗೆ ಸದ್ದು ಕೇಳಿ ರಾಮನ್ ತನ್ನ ಯೋಚನಾಲಹರಿಯಿಂದ ಎಚ್ಚತ್ತ. ಬಂಡೆಯಿಂದ ಬಾಗಿ ನೋಡಿದಾಗ ರಸ್ತೆಯ ತಿರುವಿನಲ್ಲಿ



ತನ್ನ ತಂದೆಯೇ ನಡೆದು ಬರುತ್ತಿರುವುದು ಕಂಡಿತು. ರಾಮನ್ ಕೂಗಿದ, ಅದನ್ನು ಕೇಳಿದ ಅವನ ತಂದೆ ಚಕಿತನಾಗಿ ನಿಂತ. ಪುಸ್ತಕವನ್ನು ಮತ್ತೆ ಅಂಗಿಯೊಳಗಿಟ್ಟುಕೊಂಡು, ರಾಮನ್ ಕೆಳಕ್ಕಿಳಿದು ಹಾದಿ ಮುಟ್ಟಿದ.

'ರಾಮನ್, ಇಲ್ಲೇನು ಮಾಡುತ್ತಿದ್ದೀಯ ?'

'ಸ್ವಲ್ಪ ಹೊತ್ತು ವಿಶ್ರಮಿಸಿಕೊಳ್ಳಲು ನಿಂತೆ ಮತ್ತು–'ಓದುವುದಕ್ಕೋಸ್ಕರ' ಅವನ ತಂದೆಯೇ ಮಾತನ್ನು ಪೂರ್ತಿಮಾಡಿದ. 'ಒಂದೊಂದು ಸಲ ನೀನು ಅಂಥ ಪುಸ್ತಕಗಳನ್ನು ಕೊಂಡಾಗಲೂ'–ತಂದೆ ತಲೆಯನ್ನು ಅಲ್ಲಾಡಿಸಿದರು. ಆದರೆ ಆತನ ದನಿಯಲ್ಲಿ ಕೋಪವಿರಲಿಲ್ಲ; ವಾಸ್ತವವಾಗಿ ಆತ ತನ್ನ ಮಗನತ್ತ ನೋಡಿದಾಗ ಕಣ್ಣಲ್ಲಿ ಹೆಮ್ಮೆ ತುಂಬಿತ್ತು. ಆತ ಮುಂದೆ ನಡೆದ, ರಾಮನ್ ಆತನ ಪಕ್ಕದಲ್ಲಿ ನಡೆದ.

'ಅಗೋ, ಅಲ್ಲಿ ಕೆಳಗಡೆ ಕಾಣುವುದಲ್ಲಾ, ಆ ಮೈದಾನಗಳು ಪುಸ್ತಕದಲ್ಲಿ ಹೇಳಿರುವ ಯುದ್ಧ ನಡೆದಂತಹ ಮೈದಾನಗಳಂತೆಯೇ ಇದೆ ಎಂದು ನಾನು ಯೋಚಿಸುತ್ತಿದ್ದೆ' ಎಂದ ರಾಮನ್.

ಹಾಗೆಂದು ಕ್ಷಣಕಾಲ ಮಾತು ನಿಲ್ಲಿಸಿದ–ತಂದೆ ಯಾವ ಯುದ್ಧ? ಎಂದು ಕೇಳುತ್ತಾರೆ, ಆಗ ತಾನು ಅದರ ವಿಷಯ ಹೇಳಬಹುದು ಎಂದು

ಅವನ ಎಣಿಕೆಯಾಗಿತ್ತು. ಆದರೆ ತಂದೆ ಹಾಗೆ ಮಾಡಲಿಲ್ಲ, ಸುಮ್ಮನೆ ತಲೆ ಅಲ್ಲಾಡಿಸಿ, ನೀನು ಕೃಷ್ಣ, ಅರ್ಜುನ, ಭೀಷ್ಮರ ವಿಷಯ ಓದುತ್ತಿದ್ದೀ' ಎಂದ.

'ಅವರ ವಿಷಯ ನಿಮಗೆ ಗೊತ್ತೆ ಹಾಗಾದರೆ ?' ಎಂದು ರಾಮನ್ ಅಚ್ಚರಿಯಿಂದ ಕಣ್ಣರಳಿಸಿ ಕೇಳಿದ. 'ಆದರೆ ನೀವು–' ಗೊಂದಲಕ್ಕೆ ಸಿಲುಕಿ ಅರ್ಧಕ್ಕೇ ಮಾತು ನಿಲ್ಲಿಸಿದ.

'ನನಗೆ ಓದಲು ಬರುವುದಿಲ್ಲ ಎಂದೇ?' ತಂದೆ ಮೃದುವಾದ ದನಿಯಲ್ಲೇ ಹೇಳಿದರು. ಆದರೂ ದನಿಯಲ್ಲಿ ಸ್ವಲ್ಪ ಕಹಿಭಾವನೆಯಿದ್ದಂತೆ ತೋರಿತು. 'ಮಗೂ, ಎಲ್ಲ ಜ್ಞಾನವೂ ಪುಸ್ತಕಗಳಿಂದಲೇ ಬರಬೇಕೆಂದು ತಿಳಿಯಬೇಡ, ನಾನು ನಿನಗಿಂತ ಚಿಕ್ಕವನಿದ್ದಾಗಲೆ ಆ ಕಥೆಗಳನ್ನೆಲ್ಲಾ ಕಲಿತೆ.'

'ಹೇಗೆ ?'–ರಾಮನ್ ಕುತೂಹಲದಿಂದ ಕೇಳಿದ.

'ನನ್ನ ತಂದೆಯಿಂದ; ಅವರು ಕಲಿತದ್ದು ಅವರ ತಂದೆಯಿಂದ.'

'ಆದರೆ ನೀವು ಅವನ್ನು ನನಗೆ ಹೇಳಲೇ ಇಲ್ಲ ?'

'ನಾನು ಕತೆಗಾರನಲ್ಲ. ಅಲ್ಲದೆ ಎಂದಾದರೊಂದು ದಿನ ನೀನು ಶಾಲೆಗೆ ಹೋಗಿ ನೀನಾಗಿಯೇ ಅವನ್ನು ಓದಲು ಕಲಿಯುವೆಯೆಂದು ನಾನು ಆಶಿಸಿದ್ದೆ.'

'ಆದರೆ, ನಿಮ್ಮ ತಂದೆ, ಅವರ ತಂದೆ ಓದಲೇ ಇಲ್ಲವಲ್ಲಾ.'

'ಇಲ್ಲ. ನಮ್ಮ ಮನೆಯಲ್ಲಿ ಓದಲು ಕಲಿತವರಲ್ಲಿ ನೀನೇ ಮೊದಲಿಗ; ಶಾಲೆಗೆ ಹೋಗುತ್ತಿರುವುದೂ ನೀನೇ ಮೊದಲು. ನೀನು ಅದೃಷ್ಟವಂತ, ರಾಮನ್. ನಾನು ನನ್ನ ತಂದೆ ಹೇಳಿದಷ್ಟನ್ನು ಮಾತ್ರ ಕಲಿತೆ; ಅವರು ಅವರ ತಂದೆ ಹೇಳಿದಷ್ಟನ್ನು ಮಾತ್ರ ಕಲಿತರು. ಆದರೆ ನೀನು ನಮಗೆ ಎಂದೂ ತಿಳಿಯದಿದ್ದಂಥ ಅನೇಕ ವಿಷಯಗಳನ್ನು ಕಲಿಯಬಹುದು. ಬರಿಯ ಕಥೆಗಳಷ್ಟೇ ಅಲ್ಲ, ಇನ್ನೂ ಬಹಳ ವಿಷಯಗಳನ್ನು ತಿಳಿಯಬಹುದು.'

ರಾಮನ್ ದೀರ್ಘವಾಗಿ ಉಸಿರೆಳೆದ; ಅವನ ಕಣ್ಣುಗಳು ಹೊಳೆಯುತ್ತಿದ್ದವು. ಅವನು ಬಯಸಿದ್ದುದೂ ಅದೇ–ಅನೇಕ ವಿಷಯಗಳು ! ತಾನು ಕೇವಲ ಮರ ಕಡಿಯುವವನ ಮಗನಷ್ಟೇ ಆಗಿ ಉಳಿಯುವುದಿಲ್ಲ. ತಾನು ಬೆಳೆದಾಗ ಕೇವಲ ಮರಕಡಿಯುವವನಾಗುಳಿಯುವುದಿಲ್ಲ. ತಾನು ಇನ್ನೂ ಹೆಚ್ಚಿನವನಾಗಬೇಕು; ಪುಸ್ತಕಗಳನ್ನೋದಿ ಪಂಡಿತನಾಗುತ್ತೇನೆ ಅಂದುಕೊಂಡ.

ರಾಮನ್ ಮತ್ತೆ ಮೈದಾನಗಳತ್ತ ಕಣ್ಣುಹಾಯಿಸಿದ. ವಿಶಾಲವಾದ ಮೈದಾನದ ನಡುವೆ ಧೂಳಿನ ನಡುವೆ ಮಸುಕು ಮಸುಕಾಗಿ ಒಂದು ಪುಟ್ಟಕೀಟ ಹರಿದುಹೋಗುತ್ತಿತ್ತು. ರಸ್ತೆಯಲ್ಲಿ ಬಂಡೆಗಳಡಿ ಇರುವ ಜರಿಹುಳದಂತೆ. ಆದರೆ ಅದರಿಂದ ಹೊಗೆ ಹೊರಹೊಮ್ಮುತ್ತಿತ್ತು. ರಾಮನ್ ಥಟ್ಟನೆ ನಿಂತು. 'ಅಪ್ಪಾ, ಅದೋ ನೋಡಿ ಒಂದು ರೈಲುಗಾಡಿ !' ಎಂದ.

ರಾಮನ್‌ನ ತಂದೆಯೂ ನಿಂತು ನೋಡಿ 'ನಗರಕ್ಕೆ ಹೊರಟಿರುವ ರೈಲು ಗಾಡಿ' ಎಂದು ತಲೆ ಅಲ್ಲಾಡಿಸಿದ.

'ಅಪ್ಪಾ, ಅದರ ವಿಷಯ ಹೇಳಪ್ಪಾ, ನಿಜವಾಗಿ ಅದು ಎಷ್ಟು ದೊಡ್ಡ ದಾಗಿರುತ್ತದೆ ?' ಎಂದು ರಾಮನ್ ಒತ್ತಾಯ ಮಾಡಿದ. ಅವನಿಗೆ ಉತ್ತರ ಬಾಯಿಪಾಠವಾಗಿಬಿಟ್ಟಿತ್ತು; ಆದರೂ ಎಷ್ಟು ಸಲ ಕೇಳಿದರೂ ಬೇಸರವಾಗು ತ್ತಿರಲಿಲ್ಲ.

'ಅದರ ಪ್ರತಿಯೊಂದು ಬೋಗಿಯೂ ಕೆಳಗಿಂದ ಇಲ್ಲಿಗೆ ಬರುವ ಬಸ್ಸಿ ಗಿಂತ ದೊಡ್ಡದಾಗಿರುತ್ತದೆ. ಎಂಜಿನ್ನು ಇನ್ನೂ ದೊಡ್ಡದು, ಎಂಜಿನ್ನಿನೊಳಗಿ ರುವ ಬೆಂಕಿಯಿಂದ ಚಕ್ರಗಳು ತಿರುಗಿ ಅವು ಹಿಂದಿರುವ ಬೋಗಿಗಳನ್ನೂ ಎಳೆ ಯುತ್ತವೆ' ತಂದೆ ಎಂದಿನಂತೆ ಉತ್ತರವಿತ್ತ.

'ಆ ರೈಲುಗಾಡಿ ಇಲ್ಲಿಗೆ ಬೆಟ್ಟದ ಮೇಲಕ್ಕೆ ಬಂದರೆ !'

'ಈ ಕಡಿದಾದ ಏರುಪೇರಿನ ಜಾಗದಲ್ಲಿ ಇಳಿಜಾರಿನಲ್ಲಿ ರೈಲುಕಂಬಿ ಹಾಕಲು ಯಾರಿಗೂ ಆಗುವುದಿಲ್ಲ. ಬಸ್ಸು ಮೇಲಕ್ಕೆ ಬಂದು ಹೋಗಲು ರಸ್ತೆ ಹಾಕುವುದಕ್ಕೆ ಅನೇಕ ವರ್ಷ ಹಿಡಿಯಿತು. ಅದಕ್ಕೆ ಮುಂಚೆ ಎಲ್ಲರೂ ನಡೆದೇ ಬರಬೇಕಾಗಿತ್ತು.'

ಇಬ್ಬರೂ ಮತ್ತೆ ಮುಂದಕ್ಕೆ ನಡೆದರು, ರಾಮನ್, ಹೇಳಿದ: 'ತಾತ ನಟೇಶನ್ ಆ ದಿನಗಳ ವಿಷಯವಾಗಿ ಮಾತಾಡುವುದನ್ನು ಕೇಳಿದ್ದೀನಿ. ಅಪ್ಪಾ, ಕೆಳಗಡೆ ಆ ಬಯಲು ಸೀಮೆಗೆ ನನಗೆ ಹೋಗಲು ಸಾಧ್ಯವಾಗುವುದು ಯಾವಾಗ ?'

'ತುಂಬಾ ದಿನ ಬೇಕು ಮಗು, ಅಲ್ಲದೆ ಇನ್ನೊಂದು ವಿಷಯ ನೀನು ಅದರ ಬಗ್ಗೆ ತುಂಬಾ ಕಾತರಪಡಬೇಡ. ಅದು ಅಷ್ಟೊಂದು ಭವ್ಯವಾಗೇನೂ ಕಾಣಿಸಲಾರದು. ಅಲ್ಲಿ ಬಹಳ ಸೆಖೆ.'

ಸೆಖೆ ಅಂದರೆ ಹೇಗಿರುತ್ತದೆಯೋ ಎಂದು ರಾಮನ್ ಯೋಚ್ನಿದ ಕಲ್ಪಿಸಿಕೊಳ್ಳಲೂ ಆಗಲಿಲ್ಲ. ಈ ಹನ್ನೆರಡು ವರ್ಷಗಳಲ್ಲಿ ಅವನು ತಾನು ಹುಟ್ಟಿದ ಈ ತಣ್ಣನೆಯ ಬೆಟ್ಟದ ಇಳಿಜಾರುಗಳನ್ನು ಬಿಟ್ಟುಹೋಗಿದ್ದೇ ಇಲ್ಲ. ಇಲ್ಲಿ ಬಿಸಿಲೇನೋ ಜೋರಾಗಿತ್ತು, ಆದರೆ ಗಾಳಿ ಮಾತ್ರ ಎಂದೂ ಶಾಖವಾಗಿದ್ದಿಲ್ಲ. ರಾತ್ರಿಯಂತೂ ಥಂಡಿ; ತೇವದ ಹವೆ. ಎಷ್ಟೋ ಸಲ ಅನೇಕ ದಿನ ಸೂರ್ಯ ಕಾಣುತ್ತಲೇ ಇರದ ಸಂದರ್ಭಗಳಿದ್ದವು. ಆಗ ದಟ್ಟವಾಗಿ ಮೋಡ ಕವಿದು, ಜೋರಾದ ಮುಂಗಾರು ಮಳೆ ಹುಯ್ಯುತ್ತಿತ್ತು. ಥಣ ನೆಯ ಗಾಳಿ ಜೋರಾಗಿ ಬೀಸಿ ಮರಗಳ ದೊಡ್ಡ ಕೊಂಬೆಗಳೇ ಕಿತ್ತು ಬೀಳುತ್ತಿದ್ದವು. ಕೆರೆಯ ನೀರು ಕದಡಿ ಅದರ ದಂಡೆಗಳಲ್ಲಿ ನೊರೆಗಟ್ಟಿರುತ್ತಿತ್ತು.

ಆದರೆ ಸೆಖೆಯೋ ಇಲ್ಲವೋ, ತಾನಂತೂ ಎಂದಾದರೊಂದು ದಿನ ಆ ನಗರಕ್ಕೆ, ದೂರದ ಆ ಇನ್ನೊಂದು ದಿವ್ಯ ಲೋಕಕ್ಕೆ ಹೋಗುವುದು ಖಂಡಿತ ವೆಂದು ಮಂಜುಗಟ್ಟಿದ ಕಣ್ಣಿಂದ ಬಯಲಿನಾಚೆ ನಗರವಿದ್ದತ್ತ ನೋಡುತ್ತ ರಾಮನ್ ಯೋಚಿಸಿದ. ಪಂಡಿತರು ಇರಬೇಕಾದುದು ಅಲ್ಲಿ, ನಗರದಲ್ಲಿ, ನಿಜ ವಾದ ಪಂಡಿತ ಇಂಥ ಬೆಟ್ಟಗಳಲ್ಲಿರುವುದನ್ನು ಯಾರು ಕೇಳಬಲ್ಲರು ? ಈ ವೇ ಳೆಗೆ ಇಬ್ಬರೂ ಬೆಟ್ಟದ ತುದಿಯ ಹಾದಿ ಮತ್ತೆ ಮುಖ್ಯ ರಸ್ತೆಗೆ ಸೇರುವ ಸ್ಥಳಕ್ಕೆ ಬಂದಿದ್ದರು. ಇಬ್ಬರೂ ಮೌನವಾಗಿ ನಡೆದಿದ್ದರು, ತಂದೆಯ ಪಾದರಕ್ಷೆ ಗಳ ಟಪ್–ಟಪ್ ದನಿ ಮಾತ್ರ ಕೇಳಿಬರುತ್ತಿತ್ತು. ಮುಚ್ಚಂಜೆಯಾಗಿತ್ತು. ತೆಳ್ಳನೆಯ ಷರಟು, ಹರಿದುಹೋಗಿದ್ದ ಚೆಡ್ಡಿ ಧರಿಸಿದ್ದ ರಾಮನ್‌ನ ಮೈ ಸ್ವಲ್ಪ ನಡುಗಿತು. ಗಾಳಿಯಲ್ಲಿ ಮಳೆಯ ತೇವವಿದ್ದ ವಾಸನೆ ಬರುತ್ತಿತ್ತು.

ಕೊನೆಗೆ ಅವರ ಮನೆ ಸಿಕ್ಕಿತು. ಸಣ್ಣ ಕಮರಿಯೊಂದರ ಪಕ್ಕದಲ್ಲಿ ಮಟ್ಟಸವಾದ ಜಾಗದಲ್ಲಿ ಮುದುಡಿ ಕುಳಿತಿದ್ದ ಮನೆ. ಇಟ್ಟಿಗೆ ಗೋಡೆ, ತೆಂಗಿನ ಚಾಪೆಯ ಚಾವಣಿಗಳು ಇನ್ನೂ ಸಾಯಂಕಾಲದ ಹೊಂಬೆಳಕನ್ನು ಹಿಡಿದಿಟ್ಟಂತೆ ಭಾಸವಾಯಿತು. ಮನೆಯ ಸುತ್ತ ಒಪ್ಪವಾಗಿ ಚಿಡಿಸಿದ್ದ ಪಾತಿಗಳಲ್ಲಿ ಮಾರು ಕಟ್ಟೆಗೊಯ್ಯಲು ಬೆಳೆಸಿದ್ದ ತರಕಾರಿ. ಸಾಲುಸಾಲಾಗಿ ಬೆಳೆದು ನಿಂತ ಕೆಂಪು ಮೂಲಂಗಿ, ಒಂದು ಕಡೆ ಹರಡಿಕೊಂಡಿದ್ದ ಕಾಳಿನ ಗೊಂಚಲುಗಳು, ಇನ್ನೊಂದು ಕಡೆ ಗುಂಡಗೆ ತುಂಬಿ ಬೆಳೆದಿದ್ದ ಕೋಸುಗಡ್ಡೆಗಳು, ಇನ್ನೊಂದು ಜಾಗದಲ್ಲಿ ಅಚ್ಚಕೆಂಪು ಬಣ್ಣದಿಂದ ಕೂಡಿದ್ದ ಬೀಟ್ ಗಡ್ಡೆಗಳು, ಮತ್ತೊಂದೆಡೆ ದಟ್ಟವಾಗಿ

ಮುಂವಬಣ್ಣದ ಬಸಲೆ ಸೊಪ್ಪು, ಅತ್ತಕಡೆ ಅಚ್ಚ ಹಸಿರಾವ 'ಲೆಟಿಸ್' ಸೊಪ್ಪು, ಹಿಂದುಗಡೆ ದ್ರಾಕ್ಷಿಬಳ್ಳಿ ಬಿಡಿಸಿದ್ದ ಚಪ್ಪರ. ಮನೆಯಿಂದ ಕೆಳಭಾಗದಲ್ಲಿ ಒಂದು ಸಣ್ಣ ತೊರೆ ಹರಿಯುತ್ತಿತ್ತು. ಸಂಜೆಯ ಸ್ನಾನದಲ್ಲಿ ತೊಡಗಿದ್ದ ನೆರೆಹೊರೆಯ ಮಕ್ಕಳು ಕೆಲವರು ಕೂಗಾಡುತ್ತ ನೀರೆರಚಿಕೊಳ್ಳುತ್ತಿದ್ದರು.

ರಾಮನ್‌ನ ಏಳು ವರ್ಷ ವಯಸ್ಸಿನ ತಂಗಿ ವಾಸಂತಿ ಮನೆಬಾಗಿಲಲ್ಲಿ ಹೊಸ್ತಿಲ ಮೇಲೆ ಕುಳಿತಿದ್ದಳು. ಅವಳ ಪುಟ್ಟ ತಲೆ ಬಾಗಿದ್ದು ಅವಳ ದೃಷ್ಟಿಯೆಲ್ಲ ಮಡಿಲಲ್ಲಿಟ್ಟುಕೊಂಡಿದ್ದ ಕೆಲಸದತ್ತ ಕೇಂದ್ರೀಕರಿಸಿತ್ತು.

"ತಂಗಚ್ಚಿ, ಬೆಳಕೇ ಇಲ್ಲ; ಇನ್ನೂ ಹೇಗೆ ಹೊಲಿಯುತ್ತಿದ್ದೀ?" ಮನೆ ಸಮೀಪಿಸುತ್ತಿದ್ದಂತೆ ರಾಮನ್ ಕೂಗಿ ಕೇಳಿದ.

ವಾಸಂತಿ ನಿಟ್ಟುಸಿರಿಟ್ಟು ಹೇಳಿದ್ದಳು, "ಇದೋ ಮುಗಿಯಿತು, ನೋಡು. ನಮ್ಮ ಹೊದಿಕೆ ಹರಿದು ಹೋಗಿದ್ದುದನ್ನು ಹೊಲಿದಿಟ್ಟೆ." ಉಣ್ಣೆ ಬಟ್ಟೆಯ ಹರಿದಿದ್ದ ಭಾಗಗಳನ್ನು ಸೇರಿಸಿದ್ದ ಆ ದಪ್ಪನೆಯ, ದೂರ ದೂರದ ಹೊಲಿಗೆಗಳನ್ನು ರಾಮನ್ ನೋಡಲಾಗುವಂತೆ ಅವಳು ಅದನ್ನು ಮುಂದೆ ಹಿಡಿದಳು. "ರಾತ್ರಿ ನಾವು ಮಲಗಿದ್ದಾಗ ದಾಸನ್ ಆ ದೊಡ್ಡ ತೂತಿನಲ್ಲಿ ಕಾಲು ಹಾಕಿ ಇದು ಇನ್ನಷ್ಟು ಹರಿದುಹೋಗಿತ್ತು."

"ನಾನು ಬೇಕೆಂದೇನೂ ಹಾಗೆ ಮಾಡಲಿಲ್ಲ"–ವಾಸಂತಿ ಮಾತಾಡುತ್ತಿದ್ದಂತೆ ಮನೆಯ ಪಕ್ಕದಿಂದ ಬಂದ ದಾಸನ್ ಹೇಳಿದ. ಅವನ ಕೈಯಲ್ಲಿ ಕಣಿವೆಯಲ್ಲಿ ಆಯ್ದು ತಂದ ಒಂದು ಕಟ್ಟಿಗೆ ಹೊರೆಯಿತ್ತು.

"ಅದು ನಿಜ ಅನ್ನು. ಕನಸಿನಲ್ಲಿ ನೀನು ಏಗರಾಡುತ್ತಿದ್ದೆ ಅಂತ ಕಾಣುತ್ತೆ, ತಂಬಿ." ವಾಸಂತಿ ನಕ್ಕು ದಾಸನ್‌ನ ತಲೆಯ ಪುಟ್ಟ ಗುಂಗುರು ಕೂದಲು ಹಿಡಿದೆಳೆಯಲು ಮುಂದಾದಳು. ಆದರೆ ಅವನು ಅವಳ ಕೈಗೆ ಸಿಕ್ಕದೆ ಮನೆಯೊಳಕ್ಕೆ ನುಸುಳಿಹೋದ. ಮಕ್ಕಳು ಒಬ್ಬರನ್ನೊಬ್ಬರು ನಿಜವಾದ ಹೆಸರು ಹಿಡಿದು ಕೂಗುತ್ತಿದ್ದುದೇ ಅಪರೂಪ. ರಾಮನ್‌ಗೆ ವಾಸಂತಿ "ತಂಗಚ್ಚಿ" (ಪುಟ್ಟ ತಂಗಿ) ಆಗಿದ್ದಳು; ಅವಳು ಅವನನ್ನು "ಅಣ್ಣ" ಎಂದು ಕರೆಯುತ್ತಿದ್ದರು. ಇವರಿಬ್ಬರೂ ದಾಸನ್‌ನನ್ನು "ತಂಬಿ" (ಪುಟ್ಟ ತಮ್ಮ) ಎಂದು ಕೂಗುತ್ತಿದ್ದರು.

ವಾಸಂತಿ ಜೋಪಾನವಾಗಿ ಹೊದಿಕೆಯನ್ನು ಮಡಿಸಿ ರಾತ್ರಿಯವರೆಗೆ ಒಂದು ಮೂಲೆಯಲ್ಲಿಟ್ಟಿರಲು ಒಳಗಡೆಗೆ ಹೋದಳು. ಅವಳ ಹಿಂದೆ ರಾಮನ್

ಮತ್ತು ಅವನ ತಂದೆ ಕೂಡ ಸ್ವಲ್ಪ ಕತ್ತಲು ತುಂಬಿದ್ದ ಕೋಣೆಯೊಳಕ್ಕೆ ನಡೆದರು. ಮೂಲೆಯಲ್ಲಿ ಒಂದು ಸಣ್ಣ ಒಲೆಯ ಮೇಲೆ ತಪ್ಪಲೆಯೊಂದರಲ್ಲಿ ಅನ್ನ ಬೇಯುತ್ತಿತ್ತು. ಒಲೆಯ ಮುಂದೆ ರಾಮನ್‌ನ ತಾಯಿ ಕುಳಿತು ಅನ್ನವನ್ನು ಕಲಕುತ್ತಿದ್ದಳು; ದಾಸನ್ ತಂದ ಕಟ್ಟಿಗೆ ಪುರಲೆಗಳನ್ನು ಒಲೆಯೊಳಕ್ಕೆ ತುರುಕುತ್ತಿದ್ದಳು. ಕೋಣೆಯ ಇನ್ನೊಂದು ಮೂಲೆಯಲ್ಲಿ ಪುಟ್ಟಮಗು ಕಂಬಳಿ ಹೊದೆದು ಮಲಗಿದ್ದು ತನ್ನಷ್ಟಕ್ಕೆ ತಾನೇ ಕೇಕೆ ಹಾಕುತ್ತಿತ್ತು.

"ಅನ್ನ ಆಗುತ್ತ ಬಂದಿದೆ, ನೀವೆಲ್ಲಾ ಕಾಲು ತೊಳೆದು ಬರುವುದರೊಳಗೆ ಸಿದ್ಧವಾಗುತ್ತದೆ" ಎಂದು ಆಕೆ ಅವರೆಲ್ಲಾ ಒಳಗೆ ಬರುತ್ತಿದ್ದಂತೆ ಹೇಳಿದಳು,

ಬೆಚ್ಚನೆಯ ಕೋಣೆ ಬಿಟ್ಟು ಮತ್ತೆ ಹೊರಗೆ ಚಳಿಯಲ್ಲಿ ಹೋಗುವುದು ರಾಮನ್‌ಗೆ ಕಷ್ಟವೆನಿಸಿತು; ತೊರೆಯ ಆ ಥಣ್ಣನೆ ನೀರನ್ನು ಮುಖಕ್ಕೆ ಎರಚಿಕೊಳ್ಳುವುದು ಮತ್ತೂ ಕಷ್ಟ. ನೆರೆಹೊರೆಯ ಮಕ್ಕಳೆಲ್ಲಾ ಆಗಲೆ ತಂತಮ್ಮ ಮನೆಗಳಿಗೆ ಹೋಗಿದ್ದರು. ರಾಮನ್ ಮತ್ತು ಅವನ ತಂದೆ ಇಬ್ಬರೇ ಹೊರಗುಳಿದಿದ್ದರು. ಮೋಡ ಕವಿದಿದ್ದುದರಿಂದ ಕತ್ತಲೆ ಬೇಗನೆ ಅವತರಿಸಿತು. ತೇವದ ಗಾಳಿಯಲ್ಲಿ ಕಪ್ಪೆಗಳು ಮತ್ತು ಇತರ ಪ್ರಾಣಿಗಳ ಶಬ್ದಗಳು ಕೇಳಿಬರುತ್ತಿದ್ದವು.

ಅವರುಗಳು ಮನೆಯೊಳಕ್ಕೆ ಬಂದಾಗ ವಾಸಂತಿಯು ಬಾಳೆಯೆಲೆಗಳನ್ನು ಹಾಕುವುದರಲ್ಲಿ ತಾಯಿಗೆ ನೆರವಾಗುತ್ತಿದ್ದಳು. ಆ ಮೇಲೆ ತಾಯಿ ಬಿಸಿಯಾದ ಹೊಗೆಯಾಡುತ್ತಿದ್ದ ಅನ್ನವನ್ನು ಎಲೆಗಳಲ್ಲಿ ಬಡಿಸಿದಳು. ಮೊದಲು ರಾಮನ್‌ನ ತಂದೆಗೆ, ಆ ಮೇಲೆ ರಾಮನ್ ಮತ್ತು ದಾಸನ್‌ಗೆ, ಕೊನೆಗೆ ವಾಸಂತಿಗೆ ಮತ್ತು ತನಗೆ. ಪುಟ್ಟ ಮಗುವಿಗಾಗಿ ಸ್ವಲ್ಪ ಅನ್ನ ತೆಗೆದಿಟ್ಟು ನೀರಲ್ಲಿ ಕಲಸಲಾಗಿತ್ತು. ಊಟಕ್ಕೆ ಮೆಣಸಿನ ಸಾರು ಇತ್ತು. ರಾಮನ್ ಬಿಸಿಯಾದ ಅನ್ನವನ್ನು ಎಲೆಯಲ್ಲಿ ಹರಡಿ ಊದುತ್ತ ಅನ್ನವನ್ನು ಆರಿಸಿದ.

ಊಟದ ಸಮಯದಲ್ಲಿ ಯಾರೂ ಮಾತಾಡಲಿಲ್ಲ. ಒಲೆಯಲ್ಲಿನ ಬೆಂಕಿ ಸಣ್ಣದಾಗಿ ಸೌದೆಗಳು ಮುಗಿದು ತಣ್ಣಗಾಯಿತು. ಕತ್ತಲೆಯಲ್ಲಿ ಕೋಣೆಗೆ ಬೆಳಕು ನೀಡಲು ದೀಪಕ್ಕೆ ಎಣ್ಣೆಯಿರಲಿಲ್ಲ. ಊಟ ಮುಗಿದ ಮೇಲೆ ವಾಸಂತಿ ಎಲೆಗಳನ್ನು ಎತ್ತಿ ಹೊರಕ್ಕೊಯ್ದು ಅವನ್ನು ಸುಟ್ಟಳು; ಅವಳ ತಾಯಿ ಅನ್ನದ ತಪ್ಪಲೆಯನ್ನು ಮರಳು ಮತ್ತು ಬೂದಿಯಿಂದ ಉಜ್ಜಿ ಕಪ್ಪು ಕಳೆದು ತಪ್ಪಲೆ ಮತ್ತೆ ಹೊಳೆಯುವಂತೆ ತೊಳೆಯಲು ಹೊರಕ್ಕೊಯ್ದಳು;

ಮಗುವಿಗೆ ಅನ್ನವುಣಿಸಿ ಹೊದಿಸಿ ಮಲಗಿಸಿ, ಮಾರನೆಯ ಬೆಳಿಗ್ಗೆಗೆ ದೋಸೆಗಳಿಗೆ ಅಕ್ಕಿ–ಬೇಳೆ ರುಬ್ಬಿಡಲು ಮತ್ತೆ ಹೊರಕ್ಕೆ ಬಂದಳು. ಒಣಗಿದ ಬಟಾಣಿಯಂತೆ ಎರಡಾಗಿ ಒಡೆದಿದ್ದ ಈ ಅಕ್ಕಿ, ಬೇಳೆ ಹಲವು ಗಂಟೆಗಳಿಂದ ನೀರಿನಲ್ಲಿ ನೆನೆದಿತ್ತು. ತಾಯಿ ಇದನ್ನು ಒರಳಿಗೆ ಹಾಕಿ ಒರಳು ಕಲ್ಲಿನಿಂದ ದಪ್ಪಗೆ ಹಿಟ್ಟು ಸಿದ್ಧವಾಗುವ



ವರೆಗೂ ರುಬ್ಬಿದಳು. ರಾತ್ರಿ ಹಿಟ್ಟನ್ನು ಹಾಗೆಯೇ ಇಟ್ಟಿದ್ದು ಬೆಳಿಗ್ಗೆ ತೆಳುವಾಗಿ ದೋಸೆ ಹೊಯ್ಯುವುದಕ್ಕೆ ಈ ತಯಾರಿ.

ಆಗಲೇ ವಾಸಂತಿ ಮತ್ತು ದಾಸನ್ ತಾಳೆಗರಿಗಳ ಚಾಪೆ ಹರವಿ ಮಲಗಿಕೊಂಡು ಸಂಜೆ ಹರಕಲು ಭಾಗಗಳನ್ನು ಹೊಲಿದಿದ್ದ ಹೊದಿಕೆಯನ್ನು ಹೊದೆದುಕೊಂಡಿದ್ದರು, ರಾಮನ್ ಮನೆಯ ಮುಂದೆ ಅದರ ಒರಟು ಗೋಡೆಗೆ ಒರಗಿ ಕುಳಿತು ಒಂದು ಸಣ್ಣ ಕೊಂಬೆಯಿಂದ ನೆಲದ ಮೇಲೆ ಶಬ್ದಗಳನ್ನು ಬರೆಯುವದರಲ್ಲಿ ತೊಡಗಿದ್ದ. ಶಾಲಾ ಮಾಸ್ತರರ ಎಚ್ಚರಿಕೆಯನ್ನು ಜ್ಞಾಪಿಸಿಕೊಂಡು ಬರೆದಿದ್ದ ಪದಗಳನ್ನು ಅಳಿಸಿ ಕೆಲವು ಅಂಕಿಗಳನ್ನು ಬರೆದ. ಅವನ್ನೂ ಅಳಿಸಿ ನಾಲ್ಕಾಣೆಗೆ ಸಮವಾದ ಇಪ್ಪತ್ತೈದು ನಯಾಪೈಸಾಗಳನ್ನು ಪ್ರತಿನಿಧಿಸುವ ಇಪ್ಪತ್ತೈದು ಗೆರೆಗಳನ್ನು ಎಳೆದ. ಅವನ್ನು ತಲಾ ಆರು ಗೆರೆಗಳ ನಾಲ್ಕು ವಿಭಾಗಗಳಾಗಿ ಕೊನೆಗೆ ಒಂದು ಗೆರೆ ಉಳಿದದ್ದನ್ನು ಕಂಡು ಹುಬ್ಬುಗಂಟಿಕ್ಕಿದ. ಒಂದು ನಯಾಪೈಸವನ್ನು ನಾಲ್ಕಾಗಿ ವಿಂಗಡಿಸಲು ಆಗುವುದಿಲ್ಲವಲ್ಲಾ. ಕೊನೆಗೆ ನಾಲ್ಕಾಣೆಗೆ ಇಪ್ಪತ್ತೈದು ನಯೇಪೈಸೆ, ಒಂದಾಣೆಗೆ ಆರು ನಯೇಪೈಸೆ ಎಂದು ನಿರ್ಧರಿಸಿದ. ಯಾರಾದರೂ ಒಂದು ನಯಾಪೈಸೆಯ ಕಾಲು ಭಾಗದ ಬಗ್ಗೆ ವಾದಿಸಿದರೆ ವಾದಿಸಿಕೊಳ್ಳಲಿ, ಅಷ್ಟೇ. ಮಾಸ್ತರು ಮುನುಸ್ವಾಮಿ ಇದನ್ನು ಒಪ್ಪುವರೆಂದು ರಾಮನ್ ಹಾರೈಸಿದ.

"ಅಕ್ಕಿ ಇನ್ನು ಎರಡು ದಿನಗಳಿಗೆ ಆಗುತ್ತೆ" ರಾಮನ್‌ನ ತಾಯಿ ಒರಳುಕಲ್ಲಿನ ಬಳಿ ಕುಳಿತಲ್ಲಿಂದಲೇ ಹೇಳಿದಳು. ಯಾರನ್ನೂ ನಿರ್ದಿಷ್ಟವಾಗಿ ಉದ್ದೇಶಿಸಿ ಆಕೆ ಮಾತಾಡಿದಂತೆ ಕಾಣಲಿಲ್ಲ. ರಾಮನ್‌ನ ತಂದೆ ಉತ್ತರ ಕೊಡಲಿಲ್ಲ. ಮನೆ ಬಾಗಿಲಲ್ಲಿ ಕುಳಿತು ಆತ ತರಕಾರಿ ತೋಟದಾಚೆ ತೊರೆಯನ್ನೂ, ಆಚೆಯಿದ್ದ ಪೈನ್ ತೋಪನ್ನೂ ಆವರಿಸಿದ್ದ ಕತ್ತಲೆಯತ್ತ ನೋಡುತ್ತಿದ್ದ.

"ಈವೊತ್ತು ತರಕಾರಿಯಷ್ಟನ್ನೂ ಬಸ್ಸಿನಲ್ಲಿ ಕೆಳಕ್ಕೆ ಹೊರಟಿದ್ದ ಮರ್ಕಿನ್ ಹೆಂಗಸೊಬ್ಬಳಿಗೆ ಮಾರಿದೆ". ರಾಮನ್‌ನ ತಾಯಿ ಮಾತು ಮುಂದುವರಿಸಿದಳು. "ನಾಳೆ ಅಷ್ಟು ಸುಲಭವಲ್ಲ. ಈವೊತ್ತು ಅನೇಕ ಹೆಂಗಸರು ತಾವು ತಂದಿದ್ದುದರಲ್ಲಿ ಅರ್ಧದಷ್ಟನ್ನು ಮಾರಾಟವಾಗದೆ ಹಿಂದಕ್ಕೊಯ್ದರು."

ರಾಮನ್‌ನ ತಂದೆ ಇನ್ನೂ ಕೆಲ ನಿಮಿಷ ಮೌನವಾಗಿಯೇ ಕುಳಿತಿದ್ದು ಕೊನೆಗೆ ಒಂದು ನಿಟ್ಟುಸಿರಿಟ್ಟು ಹೇಳಿದ: "ನಾಳೆ ನಾನು ಬಯಲು ಸೀಮೆಗೆ ಹೋಗಿಬರುತ್ತೇನೆ."

ತಂದೆಯ ದನಿಯಲ್ಲಿನ ವ್ಯಸನವನ್ನು ಗುರುತಿಸಿ ರಾಮನ್ ಮುಂದೆ ಬರಲಿದ್ದ ತಿಂಗಳುಗಳನ್ನು ನೆನೆದು ಬೆವರಿದ. ಪ್ರತಿವರ್ಷ ಈ ಗಿರಿ ಪ್ರದೇಶದ ವಾಸದ ಅವಧಿ ಮುಗಿದು ಮರ್ಕಿನ್ ಮಂದಿ ಹಿಂದಿರುಗಿದ ಮೇಲೆ

ಬೆಟ್ಟದ ಮೇಲಿದ್ದ ಜನರಲ್ಲಿ ಬಹುಮಂದಿ ಗಂಡಸರು ಬಯಲು ಸೀಮೆಗೆ ತೆರಳಿ ಪಟ್ಟಣಗಳಲ್ಲೂ, ಇತರ ದೊಡ್ಡ ಗ್ರಾಮಗಳಲ್ಲೂ ಕೆಲಸಗಳನ್ನು ಅರಸುತ್ತಿದ್ದರು. ಅವರ ಸಂಸಾರಗಳು ಬೆಟ್ಟದ ಮೇಲೆ ಉಳಿದು ಗಂಡಸರು ಹಣ ಕಳಿಸುವವರೆಗೆ ಸಾಧ್ಯವಿದ್ದಷ್ಟು ಜೀವನ ನಿರ್ವಹಿಸುತ್ತಿದ್ದರು. ಗಂಡಸರಿಗೆ ಕೆಲಸ ಸಿಕ್ಕಿತೋ ಸರಿಹೋಯಿತು; ಬಯಲು ಸೀಮೆಯಲ್ಲೂ ಕೆಲಸಗಳಿಗೆ ಕೊರತೆ ಯಾಯಿತೆಂದರೆ........

"ಈ ವರ್ಷ ರಾಮನ್‌ಗೆ ಇನ್ನೂ ಸ್ವಲ್ಪ ಹೆಚ್ಚಾಗಿ ನೆರವಾಗಬಹುದಾದಷ್ಟು ವಯಸ್ಸಾಗಿದೆ," ತಾಯಿ ಹೇಳುತ್ತಿದ್ದಳು. "ಕಳೆದ ಶನಿವಾರ ಅವನು, ವಾಸಂತಿ ಸೇರಿ ಹದಿನೈದು ಆಣೆಗಳಷ್ಟು ಹಣ್ಣು ಮಾರಿದರು."

"ಅವನು ಒಳ್ಳೇ ಹುಡುಗ"–ತಂದೆ ಗಂಭೀರವಾಗಿ ಉತ್ತರವಿತ್ತರು. ರಾಮನ್‌ನ ಹೃದಯ ತುಂಬಿಬಂದಿತು. ಅವನ ತಂದೆ ಮಾತಾಡುತ್ತಿದ್ದುದೇ ಕಡಿಮೆ; ಅವರ ಸ್ವಭಾವವೇ ಅಂತಹುದು. ತಂದೆ ತನ್ನ ಬಗ್ಗೆ ಒಳ್ಳೇ ಅಭಿಪ್ರಾಯ ಹೊಂದಿದ್ದಾರೆಂದು ಗೊತ್ತಾದುದು ಒಳ್ಳೇ ಅನುಭವ.

"ಊಟದ ಸಾಮಾನುಗಳ ಜತೆಗೆ ಇನ್ನೂ ಎಷ್ಟೋ ಬೇಕು," ತಾಯಿ ಭಾರವಾದ ದನಿಯಲ್ಲಿ ಹೇಳಿದಳು, "ಮಗುವಿಗೆ, ದಾಸನ್‌ಗೆ ಬಟ್ಟೆಗಳು, ಹೊದಿಕೆಗಳು. ನೀರಿಗೆ ಒಂದು ಹೊಸ ಬಿಂದಿಗೆ........"

"ಆ ಮೇಲೆ ನಿನಗೊಂದು ಸೀರೆ" –ತಂದೆ ನಡುವೆಯೇ ಮಾತಾಡಿದರು. "ಎಷ್ಟೊಂದು ಸಾಮಾನುಗಳು ಬೇಕೆನ್ನುವುದು ನನಗೆ ಗೊತ್ತು. ಅವಕ್ಕೆ ಕೊನೆ ಮೊದಲೇ ಇಲ್ಲ. ಇದಂತೂ ಖಂಡಿತ; ನಾನು ನಾಳೆ ಹೋಗುತ್ತೇನೆ. ಮುಂದಿನ ವಾರದ ಹೊತ್ತಿಗೆ ಸಾಮಾನು ನಿಮಗೆ ಊಟಕ್ಕೆ ಸಾಕಾಗುವಷ್ಟು ಕಳಿಸಲು ಸಾಧ್ಯವಾಗಬಹುದು, ಆದರೆ ಸ್ವಲ್ಪ ಬಟ್ಟೆಗೂ ಹಣ ಒದಗಬಹುದು. ಈ ಮಧ್ಯೆ"– ತಂದೆ ಮಾತು ನಿಲ್ಲಿಸಿದರು; ಕ್ಷಣಕಾಲ ತಡೆದು ಮತ್ತೆ ಹೇಳಿದರು– "ಈ ಮಧ್ಯೆ ರಾಮನ್ ಸ್ವಲ್ಪ ಸಹಾಯ ಮಾಡಬಹುದು. ಹೌದು, ರಾಮನ್ ಶಾಲೆಯನ್ನು ಬಿಡಬೇಕಾಗುವುದು."

ರಾಮನ್ ಸೆಟೆದು ಕುಳಿತು ಇದನ್ನು ವಿರೋಧಿಸಲು ಬಾಯಿತೆರೆದ; ಆದರೆ ಮಾತಾಡದೆ ಉಳಿದ. ತಂದೆಯ ದನಿಯಲ್ಲಿದ್ದ ಅದೊಂದು ಭಾವನೆ ಅವನನ್ನು ತಡೆಯಿತು; ಮತ್ತೆ ಹಿಂದಕ್ಕೆ ಗೋಡೆಗೊರಗಿ ಕುಳಿತ.

ರಾಮನ್‌ನ ತಾಯಿ ರುಬ್ಬುವುದನ್ನು ನಿಲ್ಲಿಸಿ ಹಿಟ್ಟನ್ನು ಒಂದು ಪಾತ್ರೆಯಲ್ಲಿ ಹಾಕಿ ಮುಚ್ಚಿಟ್ಟಳು. ಎದ್ದು ಮನೆಯೊಳಕ್ಕೆ ಹೊರಡುತ್ತಿದ್ದವಳು ರಾಮನ್‌ನನ್ನು ನೋಡಿದಳು.

"ಏ, ರಾಮನ್," ಮಲಗುವ ವೇಳೆಯಾಯಿತು. ನಾಳೆ ಬೆಳಿಗ್ಗೆ ಬಸ್ಸು ಹೊರಡುವುದಕ್ಕೆ ಮೊದಲೇ ತರಕಾರಿ ಕಿತ್ತಿಡಲು ನಾವು ಬೇಗ ಏಳಬೇಕು."

ರಾಮನ್ ಮೇಲಕ್ಕೆದ್ದ; ಹಾಗೆಯೇ ಕುಸಿಯುವಂತಾಯಿತು– ಒಂದು ಕಾಲಿಗೆ ಜೋಂಪು ಹತ್ತಿತ್ತು. ಮೆಲ್ಲನೆ ಅಡಿಯಿಡುತ್ತ ಒಳಕ್ಕೆ ನಡೆದು ಕತ್ತಲಲ್ಲೇ ಅರಸುತ್ತ ತನ್ನ ಚಾಪೆಯನ್ನು ಹುಡುಕಿ ನೆಲದ ಮೇಲೆ ಹಾಸಿದ. ಅವನಿಗಿದ್ದುದು ತಾನು ಹಾಕಿಕೊಂಡಿದ್ದ ಷರಟು, ನಿಕ್ಕರ್, ಎರಡೇ; ಆದ್ದರಿಂದ ಅವನ್ನು ಬದಲಾಯಿಸಿ ಮಲಗಲು ಬೇರೆಯಿಲ್ಲ. ಚಾಪೆಯ ಮೇಲೆ ಮಲಗಿ ಹೊದಿಕೆಯನ್ನು ಮೇಲೆಳೆದುಕೊಂಡ.

ಅವನ ತಂದೆತಾಯಿಗಳೂ ಒಳಕ್ಕೆ ಬಂದರು, ತಾಯಿ ಮಗುವನ್ನು ಮೇಲಕ್ಕೆತ್ತಿಕೊಂಡು ಪಕ್ಕದಲ್ಲಿ ಮಲಗಿಸಿ ತನ್ನ ಹೊದಿಕೆಯನ್ನೇ ಅದಕ್ಕೆ ಹೊದಿಸಿ ತಾನೂ ಮಲಗಿದಳು. ಮಳೆಯ ಮೊದಲ ಹನಿಗಳು ಚಾವಣಿಯ ಮೇಲೆ ಬಿದ್ದು ಶಬ್ದಮಾಡಲಾರಂಭಿಸಿದವು; ಕ್ರಮೇಣ ಮಳೆ ಹೆಚ್ಚಾಗಿ ರಾತ್ರಿ ಮಳೆಯ ಧೋ ಎಂಬ ಆರ್ಭಟದಿಂದ ತುಂಬಿತ್ತು, ರಾಮನ್ ತಲೆಯಮೇಲಕ್ಕೆ ಮುಸುಕೆಳೆದುಕೊಂಡ; ನಿದ್ರೆ ಬರಲು ಬಹಳ ವೇಳೆ ಹಿಡಿಯಿತು,



# ೩

ಬೆಳಗಿನ ಸೂರ್ಯಕಿರಣಗಳು ಅವರ ಮನೆಯಿದ್ದ ಕಣಿವೆಯೊಳಕ್ಕೆ ಬೀಳುವ ಮೊದಲೇ ಮಕ್ಕಳು ಎದ್ದು ಪಟ್ಟಣಕ್ಕೆ ಒಯ್ಯಲು ತರಕಾರಿ ಕಿತ್ತಿಡುವುದರಲ್ಲಿ ತೊಡಗಿದ್ದರು. ರಾಮನ್ ಮತ್ತು ದಾಸನ್ ಒದ್ದೆಯಾದ ಮಣ್ಣಿನಿಂದ ಬೀಟ್ ಮತ್ತು ಕೆಂಪು ಮೂಲಂಗಿ ಕೀಳುತ್ತಿದ್ದಂತೆ ವಾಸಂತಿ ಅವುಗಳನ್ನು ಆರಾರು ಗಡ್ಡೆಗಳ ಕಂತೆಗಳಾಗಿ ವಿಂಗಡಿಸಿ ಒಣಹುಲ್ಲಿನಿಂದ ಬಿಗಿಯುತ್ತಿದ್ದಳು. ಆಮೇಲೆ ದಾಸನ್ ಚೆನ್ನಾಗಿ ಬೆಳೆದಿದ್ದ ಲೆಟಿಸ್ ಎಲೆಗಳನ್ನೂ, ತುಂಬಿ ಬೆಳೆದಿದ್ದ ಕೋಸುಗಡ್ಡೆಗಳನ್ನೂ ಆಯಲಾರಂಭಿಸಿದ. ರಾಮನ್ ಕಾಳಿನ ಎಸಳುಗಳಿದ್ದ ಗೊಂಚಲುಗಳನ್ನು ಗಮನಿಸಿ ಬಸಲೆ ಸೊಪ್ಪಿನ ಆರು ಗೊಂಚಲುಗಳನ್ನು ಕಿತ್ತ, ಮಕ್ಕಳೆಲ್ಲಾ ಸೇರಿ ಕಿತ್ತ ತರಕಾರಿಯನ್ನು ದೊಡ್ಡ ಬುಟ್ಟಿಯೊಂದಕ್ಕೆ ತುಂಬಿದರು. ತಾಯಿ ಈ ಬುಟ್ಟಿಯನ್ನು ತಲೆಯ ಮೇಲೆ ಹೊತ್ತು ಊರಿನೊಳಕ್ಕೆ ಹೋಗುತ್ತಿದ್ದಳು. ಇವರುಗಳು ತರಕಾರಿ ತರುವ ವೇಳೆಗೆ ತಾಯಿ ದೋಸೆಗಳನ್ನು ಹೊಯ್ದು ಅವಕ್ಕೆ ಜತೆಗೆ ತೆಂಗಿನಕಾಯಿ ಚಟ್ನಿ ರುಬ್ಬಿ ಸಿದ್ಧಗೊಳಿಸಿದ್ದಳು; ತಂದೆ ಬಯಲು ಸೀಮೆಗೆ ಹೋಗಲು ತನ್ನ ಅಲ್ಪ ಸ್ವಲ್ಪ ಸಾಮಾನು–ಬಟ್ಟೆಬರೆಗಳನ್ನು ಸಣ್ಣ ಪೆಟ್ಟಿಗೆಯೊಂದರೊಳಕ್ಕೆ ತುಂಬಿದ್ದ.

ಉಪಾಹಾರ ಮುಗಿದ ಮೇಲೆ ಎಲ್ಲರೂ ಪೇಟೆಯತ್ತ ನಡೆದರು. ರಾಮನ್‌ನ ತಂದೆ ಮುಂದುಗಡೆ ನಡೆದಿದ್ದ; ಅತನ ಪಕ್ಕದಲ್ಲಿ ರಾಮನ್ ತಂದೆಯ ಪೆಟ್ಟಿಗೆ ಹೊತ್ತು ಸಾಗಿದ್ದ, ಹಿಂದೆ ತಾಯಿ ತಲೆಯ ಮೇಲೆ ಒಪ್ಪವಾಗಿ ಬುಟ್ಟಿಹೊತ್ತು ನಡೆದು ಬರುತ್ತಿದ್ದಳು; ಆಕೆಯ ಪಕ್ಕದಲ್ಲಿ ವಾಸಂತಿ–ಅವಳು ಒಂದು ಕಂಕುಳಲ್ಲಿ ಮಗುವನ್ನು, ಇನ್ನೊಂದು ಕೈಯಿಂದ ದಾಸನ್‌ನನ್ನು ಹಿಡಿದುಕೊಂಡು ಹೊರಟಿದ್ದಳು, ಸ್ವಲ್ಪಹೊತ್ತು ಯಾರೂ ಮಾತಾಡಲಿಲ್ಲ. ಊರಿಗೆ ಹೋಗುತ್ತ

ದಾರಿಯಲ್ಲಿ ಅವರು ಇನ್ನು ಕೆಲವರನ್ನು ಹಾದುಹೋದರು – ಅರಡಿ ಉದ್ದದ ಕಟ್ಟಿಗೆಗಳ ಕಂತೆಗಳಿದ್ದ ಹೊರೆಗಳನ್ನು ತಲೆಯ ಮೇಲೆ ಹೊತ್ತ ಸೌದೆಮಾರುವವರು; ಬೂದುಬಣ್ಣದ ಎಮ್ಮೆಗಳ ಹಿಂಡೊಂದನ್ನು ಮೇಯಲು ಕೆರೆಯ ಪಕ್ಕಕ್ಕೆ ಹೊಡೆದುಕೊಂಡು ಹೊರಟಿದ್ದ ಇಬ್ಬರು ಸಣ್ಣ ಹುಡುಗರು: ತರಕಾರಿ ಬುಟ್ಟಿಗಳನ್ನು ಹೊತ್ತು ನಡೆದಿದ್ದ ಇತರ ಹೆಂಗಸರು.

"ಅಗೋ! ರೋಲಿ–ಪ್ರುಚ್ಚಿ!" –ನೆಲಗಟ್ಟು ಹೊದಿಸಿದ್ದ ಬೀದಿಗೆ ಬರುತ್ತಲೆ ವಾಸಂತಿಯ ಕೈಬಿಡಿಸಿಕೊಂಡು ಸಾಗಿದ್ದ ದಾಸನ್ ಮುಂದಕ್ಕೆ ಓಡಿ ರಾಮನ್‌ನ ಮುಂದೆ ಕೈ ಹಿಡಿದ. ಅವನ ಕೈಯಲ್ಲಿ ವಿಚಿತ್ರವಾದ ಒಂದು ಕಪ್ಪನೆಯ ಹುಳು ವಿತ್ತು; ಅದನ್ನು ಮುಟ್ಟಿದಾಗ ಅದು ಸುರುಳಿ ಸುತ್ತಿಕೊಂಡು ಒಂದು ಗೋಲಿಯ ಗಾತ್ರದ ಉಂಡೆಯಾಗಿಬಿಡುತ್ತಿತ್ತು. ಇನ್ನಾವುದಾದರೂ ದಿನವಾಗಿದ್ದಿದ್ದರೆ ರಾಮನ್ ಹರ್ಷದಿಂದುಬ್ಬಿ ಅಂಥ ಇನ್ನೂ ಅಷ್ಟು ಹುಳುಗಳಿಗೆ ಹುಡುಕಲು ಜತೆ ಸೇರುತ್ತಿದ್ದ. ಆದರೆ ಇಂದು ಅವನು ಸುಮ್ಮನೆ ತಲೆ ಅಲ್ಲಾಡಿಸಿ ಮುಂದೆ ನಡೆದ.

ದಾಸನ್‌ನೇ ಅದೃಷ್ಟವಂತ! ತಂದೆ ಹೊರಟು ಹೋದಾಗ ಅವನಿಗೆ ಮಾತ್ರ ಏನೂ ಬದಲಾಗುತ್ತಿರಲಿಲ್ಲ. ಅವನು ಎಂದಿನಂತೆ ಕಣಿವೆಯಲ್ಲೂ, ಪೈನ್ ತೋಪಿನಲ್ಲೂ ನಲಿಯುತ್ತ ಓಡಾಡುತ್ತಲೇ ಇರುವನು. ಬೇಕೆಂದಾಗ ಒಲೆ ಹೊತ್ತಿಸಲು ಕೆಲವು ಕಡ್ಡಿಪುರಳೆಗಳನ್ನಾಯ್ದು ತರುವುದು. ಬೆಳಗಿನ ಹೊತ್ತು ಅಷ್ಟು ತರಕಾರಿ ಕೊಯ್ಯುವುದು ಬಿಟ್ಟರೆ ಮನೆಗಾಗಿ ಅವನು ಮಾಡುವುದೇನೂ ಇರಲಿಲ್ಲ. ಅವನಿಗೆ ಇನ್ನೂ ಶಾಲೆಗೆ ಹೋಗುವಷ್ಟು ವಯಸ್ಸಾಗಿರಲಿಲ್ಲ: ಪ್ರಾಯಶಃ ಅವನಿಗೆ ಅದರ ಗಣನೆಯೇ ಇರಲಿಲ್ಲವೇನೊ!

ಆದರೆ ನನಗೆ ಇದರ ಯೋಚನೆಯಿದೆ. ನಾನು ಮಾತ್ರ ಎಲ್ಲವನ್ನೂ ಬಿಟ್ಟುಬಿಡಬೇಕು -ಎಂದು ರಾಮನ್ ಯೋಚಿಸಿದ.

ಕಳೆದ ವರ್ಷ ತಂದೆ ತನ್ನನ್ನು ಶಾಲೆಗೆ ಕಳಿಸಲು ಯೋಚಿಸಿರುವುದಾಗಿ ಪ್ರಕಟಪಡಿಸಿದಾಗ ತನ್ನಲ್ಲಿ ಮೂಡಿದ್ದ ಆ ಅದ್ಭುತವಾದ ಹೆಮ್ಮೆಯನ್ನು ರಾಮನ್ ಸ್ಮರಿಸಿಕೊಂಡ. ತಮಿಳು ಲಿಪಿಯ ದುಂಡು ಅಕ್ಷರಗಳು. ಗೀಟುಗಳು. ಬಾಗಿದ ರೇಖೆಗಳು ಶಬ್ದಗಳಾಗಿ ರೂಪುಗೊಂಡು ಅರಿವಾಗುತ್ತಿದ್ದಂತೆ ದಿನದಿನಕ್ಕೆ ತನ್ನಲ್ಲಿ ಬೆಳೆಯುತ್ತಿದ್ದ ಆ ಸಡಗರ– ಉದ್ರೇಕವನ್ನು. ತನ್ನ ಇಡೀ ಮನೆತನದಲ್ಲಿ.

ಅಷ್ಟೇಕೆ ತನ್ನ ಹಳ್ಳಿಯಲ್ಲೇ. ಶಾಲೆಗೆ ಹೋದ ಮೊದಲಿಗ ತಾನು–ಮರಕಡಿಯುವವನ ಮಗ ರಾಮನ್. ಏಸಿಸಿದಾಗಿನ ಆ ರೋಮಾಂಚನವನ್ನು ಜ್ಞಾಪಿಸಿಕೊಂಡ.

ಕಳೆದ ವರ್ಷ ಚೆನ್ನಾಗಿತ್ತು. ರಾಮನ್‌ನ ತಂದೆ ಕೆಲಸ ಹುಡುಕಲು ಬಯಲು ಸೀಮೆಗೆ ಹೋಗಿದ್ದಾಗ ಆಹಾರ ಪದಾರ್ಥಗಳನ್ನು ಕೊಳ್ಳಲು ಸಾಕಷ್ಟು ಹಣ ಕೂಡಿಡಲಾಗಿತ್ತು. ಆಮೇಲೆ ಪ್ರತಿ ವಾರವೂ ತಪ್ಪದೆ ಹಣ ಬರುತ್ತಿತ್ತು. ನಾಳಿನ ದಿನಗಳಿಗೆ ಅಕ್ಕಿ ಕುರಿತು ಯೋಚಿಸಬೇಕಾಗಿರಲಿಲ್ಲ. ಆದರೆ ಈ ವರ್ಷ ಹಾಗಿರಲಿಲ್ಲ. ಎಲ್ಲವೂ ಕೆಟ್ಟಿತ್ತು. ಎಷ್ಟೋ ತರಕಾರಿಗಳಿಗೆ ಹುಳುಬಿದ್ದು ಕೆಟ್ಟಿದ್ದವು. ಈ ಬಾರಿ ತಂದೆಯ ಸೌದೆಗಾಡಿಯ ಮರದ ಚಕ್ರಗಳಲ್ಲೊಂದು ಒಡೆದುಹೋಗಿತ್ತು. ಅದನ್ನು ಬದಲಾಯಿಸಬೇಕಾದರೆ ಅಷ್ಟು ದಿನ ಹಿಡಿಯಿತು. ಗಾಡಿಯಿಲ್ಲದೆ ಕಾಡಿನಲ್ಲಿ ಕಡಿದ ಸೌದೆ ಸಾಗಿಸಲು ಅವಕಾಶವೇ ಇರಲಿಲ್ಲ. ಇದು ಸಾಲದೆಂಬಂತೆ ಮುಂಗಾರು ಮಳೆ ಒಂದಿಗಿಂತ ಬೇಗನೆ ಶುರುವಾಗಿಬಿಟ್ಟಿತು. ಅದರಿಂದ ಬೆಟ್ಟದ ಮೇಲಕ್ಕೆ ಬೇಸಗೆಯಲ್ಲಿ ಜನ ಬಂದಿರುವ ಅವಧಿ ನಿರೀಕ್ಷೆಗಿಂತ ಮೊದಲೇ ಮುಗಿದುಹೋಯಿತು. ತಮ್ಮ ಬಂಗಲೆಗಳ ಬೆಂಕಿಗೂಡುಗಳಿಗೆಂದು ದಪ್ಪನೆಯ ಮರದ ಕೊರಡುಗಳನ್ನು ಕೊಳ್ಳುತ್ತಿದ್ದ ಮರ್ಕಿನ್ ಜನ ಹೊರಟುಹೋದಾಗ ರಾಮನ್‌ನ ತಂದೆ ಕಡಿದಿದ್ದ ಸೌದೆಗೆ ಗಿರಾಕಿಯೇ ಇರಲಿಲ್ಲ. ಬೆಟ್ಟದ ಜನರಲ್ಲಿದ್ದುದು ಸಣ್ಣ ಸಣ್ಣ ಒಲೆಗಳು; ಅವಕ್ಕೆ ಪುರಲೆ ಕಡ್ಡಿಗಳನ್ನೊ, ಚಿಂಡಿಗಳನ್ನು ಹೊತ್ತು ತರುತ್ತಿದ್ದವರಿಂದ ಕೊಂಡ ಅಥವಾ ತಾವೇ ಆಯ್ದು ತಂದ ಸಣ್ಣ ಕಟ್ಟಿಗೆಗಳನ್ನೊ ಬಳಸುತ್ತಿದ್ದರು.

ಇನ್ನೂ ಇವೆಲ್ಲಾ ಸಾಲದೋ ಎಂಬಂತೆ ಹೊಸ ಮಗು ಬೇರೆ ಇತ್ತು. ಅದಕ್ಕೆ ಈಗ ಅನ್ನ. ಎಮ್ಮೆಹಾಲು ಬೇಕು. ತನ್ನಲ್ಲಿ ಮೂಡಿದ ಅಸಮಾಧಾನದಿಂದ ಲಜ್ಜಿತನಾಗಿ ರಾಮನ್ ಥಟ್ಟನೆ ತನ್ನ ಈ ಯೋಚನೆಯಿಂದ ವಿಮುಖನಾದ. ಛೇ. ಮಗುವನ್ನು ದೂರಬೇಕೇನು?

ಈ ವೇಳೆಗೆ ಅವರುಗಳು ಪೇಟೆಬೀದಿಯ ಕೊನೆಗೆ ಬಂದಿದ್ದರು. ರಸ್ತೆ ಪಕ್ಕದಲ್ಲಿ ಕುಳಿತಿದ್ದ ಇತರ ಹೆಂಗಸರೊಡನೆ ತನ್ನ ಜಾಗದಲ್ಲಿ ಕೂಡಲು ರಾಮನ್‌ನ ತಾಯಿ ಹೋದಳು. ಬುಟ್ಟಿಯಿಂದ ಜೋಪಾನವಾಗಿ ತರಕಾರಿಯನ್ನು ಹೊರತೆಗೆದು ತನ್ನ ಮುಂದೆ ಹರವಿದಳು. ಮಳೆಯಿಂದ ನೆನೆದು ಅವು ಹೊಸತಾಗಿದ್ದವು. ಬೇರೆ ದಿನಗಳಾದಲ್ಲಿ ತಾಯಿಗೆ ನೆರವಾಗಲು ರಾಮನ್ ಅಲ್ಲೇ



ಉಳಿಯುತ್ತ ಓರೆ ನೋಟದಿಂದ ನೋಡಿ ಅಕ್ಕಪಕ್ಕದವರು ತಂದಿದ್ದ ತರಕಾರಿ ಏನು, ಅವರುಗಳ ಬೀಟ್ ಮತ್ತು ಕೆಂಪುಮೂಲಂಗಿ ತಮ್ಮದರಷ್ಟೇ ದಪ್ಪಗಿದೆಯೆ, ಬೇರೆಯವರ ಲೆಟಿಸ್ ಮತ್ತು ಬಸಲೆ ಸೊಪ್ಪು ತಾವು ತಂದಿದ್ದ ಸೊಪ್ಪಿನಷ್ಟೇ ಹಸನಾಗಿ ಹೊಸದಾಗಿದೆಯೇ ಎಂಬುದನ್ನು ಗಮನಿಸುತ್ತಿದ್ದ. ಈಪೊತ್ತು ಮಕ್ಕಳು ತಂದೆಯೊಡನೆ ವೇಟೆಬೀದಿಯಲ್ಲಿ ಮುಂದುವರಿದು ಬಸ್ ನಿಲ್ದಾಣ ದತ್ತ ನಡೆದರು. ತಾಯಿ ಸಣ್ಣ ಮಗುವಿನೊಂದಿಗೆ ಅಲ್ಲೇ ಉಳಿದಳು. ಆಕೆ ತರಕಾರಿಯೊಂದಿಗೆ ಅಲ್ಲೇ ಕುಳಿತು ಬಸ್ಸು ಆ ಹಾದಿಯಲ್ಲಿ ಹೋದಾಗ ಕೈಬೀಸ ಬೇಕಷ್ಟೇ.

ಆಗಲೇ ಬಸ್ಸು ನಿಲ್ದಾಣದ ಮುಂದೆ ನಿಂತಿತ್ತು. ಅದರ ನೀಲಿ ಮತ್ತು ಕೆಂಪು ಬಣ್ಣದ ಇಕ್ಕೆಲಗಳೂ ರಾತ್ರಿಯ ಮಳೆಯಿಂದಾಗಿ ಹೊಳೆಯುತ್ತಿದ್ದವು. ಬಸ್ಸಿನ ಮೇಲ್ಭಾಗದಲ್ಲಿ ಇಬ್ಬರು ಗಂಡಸರು ಕೆಳಗಡೆಯಿಂದ ಬೇರೆಯವರು ಎತ್ತಿ

ಕೊಡುತ್ತಿದ್ದ ಪೆಟ್ಟಿಗೆಗಳನ್ನೂ, ಬುಟ್ಟಿಗಳನ್ನೂ ಜೋಡಿಸಿಡುತ್ತಿದ್ದರು; ಆಮೇಲೆ ದಾರಿಯಲ್ಲಿ ಮಳೆಬಂದರೆ ನೆನೆಯದಿರಲೆಂದು ಅವೆಲ್ಲಕ್ಕೂ ಕ್ಯಾನ್ವಾಸ್ ಬಟ್ಟೆ ಮುಚ್ಚಿ ಹಗ್ಗ ಬಿಗಿದರು. ಬಸ್ಸು ಭರ್ತಿಯಾಗಿತ್ತು. ರಾಮನ್‌ನ ತಂದೆಯ ಹಾಗೆಯೇ ಬೆಟ್ಟದ ಮಂದಿ ಅನೇಕರು ಕೆಲಸ ಅರಸಿ ಬಯಲು ಸೀಮೆಗೆ ಹೊರಟಿದ್ದರು. ಇತರರಿಗಿಂತ ಹೆಚ್ಚಿಗೆ ಕೆಲದಿನ ಬೆಟ್ಟದ ಮೇಲೆ ಉಳಿದಿದ್ದ ಮರ್ಕಿನ್ ಜನರು ಕೆಲವರೂ ಇದ್ದರು.

"ವಾಸಂತಿ, ಹೋಗಿ ನಿನಗೊಂದು, ದಾಸನ್‌ಗೊಂದು ಮಿಠಾಯಿ ಕೊಂಡುಕೋ" ಎಂದು ಅವರ ತಂದೆ ಅವಳ ಕೈಗೆ ಒಂದು ನಾಣ್ಯವನ್ನಿತ್ತ. ಹರ್ಷದಿಂದ ಮಕ್ಕಳಿಬ್ಬರೂ ಓಡಿದರು, ರಾಮನ್ ಅಲ್ಲೇ ಉಳಿದ.

"ರಾಮನ್, ನೀನೂ ಈ ದುಡ್ಡು ತೆಗೆದುಕೊ, ಆದರೆ ನೀನು ಅದರಿಂದ ಮಿಠಾಯಿ ಕೊಳ್ಳುವುದಿಲ್ಲವೆಂದು ಕಾಣುತ್ತೆ". ಸ್ವಲ್ಪ ಕೀಟಲೆಮಾಡುವ ಹಾಗೆ ರಾಮನ್‌ನ ತಂದೆ ತನ್ನ ಹಿರಿಯ ಮಗನತ್ತ ನೋಡಿದ. ರಾಮನ್ ತಲೆ ಅಲ್ಲಾಡಿಸಿದ. ಇಲ್ಲ, ಈ ಕಾಸಿನಿಂದ ಅವನು ಮಿಠಾಯಿ ಕೊಳ್ಳುವುದಿಲ್ಲ, ಅದರೊಂದಿಗೆ ಇನ್ನಷ್ಟು ಹಣ ಕೂಡಿಹಾಕಿ ಪುಸ್ತಕದಂಗಡಿಯ ತಂಬುಸ್ವಾಮಿಯಿಂದ ಇನ್ನೊಂದು ಪುಸ್ತಕ ಕೊಳ್ಳುತ್ತಾನೆಂಬುದು ತಂದೆಗೂ ಗೊತ್ತು.

ಕ್ಷಣಕಾಲ ಸುಮ್ಮನಿದ್ದು ರಾಮನ್‌ನ ತಂದೆ ಗಂಭೀರವಾಗಿ ಹೇಳಿದ: "ನಿನ್ನ ಶಾಲೆ ವಿಷಯ ನನಗೆ ಖೇದವನ್ನುಂಟುಮಾಡಿದೆ, ರಾಮನ್; ನಾನು ಅದಕ್ಕಾಗಿ ವಿಷಾದಿಸುವೆ. ಶಾಲೆಯೆಂದರೆ ನಿನಗೆ ಎಷ್ಟೊಂದು ಆಸೆಯೆಂಬುದನ್ನು ನಾನು ಬಲ್ಲೆ. ಪ್ರಾಯಶಃ ನನಗೆ ಒಂದು ಕೆಲಸ ಸಿಕ್ಕಿ ಸ್ವಲ್ಪ ಹಣ ಕಳುಹಿಸಲು ಸಾಧ್ಯವಾದ ಮೇಲೆ........"ಆತ ಮಾತನ್ನು ಅರ್ಧಕ್ಕೆ ನಿಲ್ಲಿಸಿದ.

ತಂದೆ ವಚನಕೊಡಲು ಬಯಸನೆಂದು ರಾಮನ್ ಭಾವಿಸಿದ. ಆದರೆ ನಾನು ಹೇಗೆ ಯೋಚಿಸುವೆನೆಂಬುದು ಅವರಿಗೆ ಗೊತ್ತಿದೆ. ಥಟ್ಟನೆ ಅವನ ಮನದಲ್ಲಿ ಕೃತಜ್ಞತೆಯ ಭಾವನೆ ತುಂಬಿಬಂದಿತು.

ತಂದೆ ನಿಧಾನವಾಗಿ ಮಾತು ಮುಂದುವರಿಸಿದರು; 'ಈ ಮಧ್ಯೆ ನಾವೊಂದ್ಯ ಕೆಲಸ ಮಾಡೋಣ. ಮನೆಗೆ ನೀನು ಗಳಿಸಿ ತರುವ ಪ್ರತಿ ಒಂದು ರೂಪಾಯಿನಲ್ಲಿ ಒಂದು ನಯಾಪೈಸಾ ನೀನೇ ಇಟ್ಟುಕೋ".

ಅಚ್ಚರಿ, ಸಂತೋಷಗಳಿಂದ ರಾಮನ್ ಕಣ್ಣರಳಿಸಿ ನೋಡಿದ. ತಂದೆ ನಕ್ಕರು, "ನಿನ್ನ ತಾಯಿಯೊಡನೆಯೂ ಮಾತಾಡಿದ್ದೇನೆ; ಆಕೆ ಇದಕ್ಕೆ ಒಪ್ಪಿದಾಳೆ". ಹಾಗೆಂದವರೇ ಮೆಲುದನಿಯಲ್ಲಿ ಹೇಳಿದರು; "ಕೆಲಸ ಮಾಡುವಷ್ಟೇ ಕನಸುಕಾ

ಣುವುದೂ ಮುಖ್ಯವೆಂದು ಆಕೆಗೆ ಅಷ್ಟು ಚೆನ್ನಾಗಿ ತಿಳಿಯುವುದಿಲ್ಲ. ನಾನು ನಿನ್ನಷ್ಟಿದ್ದಾಗ ನಮ್ಮ ತಂದೆಯಂತೆ ಕೇವಲ ಮರಕಡಿಯುವವನಷ್ಟೇ ಆಗಿರದೆ ಅದಕ್ಕಿಂತ ಹೆಚ್ಚಿನದೇನಾದರೂ ಆಗಬೇಕೆಂದು ನಾನೂ ಕನಸುಕಾಣುತ್ತಿದ್ದೆ. ಅದರಿಂದಲೇ ನಿನಗೆ ಸೂಕ್ತ ವಯಸ್ಸಾದಾಗ ನೀನು ಶಾಲೆಗೆ ಹೋಗಬೇಕೆಂದು, ಅದು ಬರೀ ಕನಸಾಗಿ ಉಳಿಯಬಾರದೆಂದು ನಾನು ಇಚ್ಛಿಸಿದೆ."

"ಅಪ್ಪಾ, ಮರಕಡಿಯುವವನಾಗಿರಲು ನಾಚಿಕೆಪಟ್ಟುಕೊಳ್ಳುವೆನೆಂದಲ್ಲ..." ರಾಮನ್ ಕೂಡಲೆ ನುಡಿದ.



"ನಿಜ. ಹಾಗಿಲ್ಲ; ನನಗೂ ಈ ಕೆಲಸದ ಬಗ್ಗೆ ಅವಮಾನವಿಲ್ಲ. ಆದರೆ ನಿನ್ನ ಕನಸನ್ನು ಉಳಿಸಿಕೊಂಡು ಬಾ, ರಾಮುನ್. ಅವನ್ನು ಬಲವಾಗಿಟ್ಟುಕೋ. ಯಾರಿಗೆ ಗೊತ್ತು ಮುಂದೆ ನಿನಗೆ ಏನು ಕಾದಿದೆಯೋ?" ಸ್ವಲ್ಪಗಟ್ಟಿಯಾಗಿ ಅತನೆಂದ "ಈಗ ಜಾಗ್ರತೆಯಾಗಿರು. ಉಳಿದವರ ಜವಾಬ್ದಾರಿಯೂ ನಿನ್ನದೇ. ನಾನಿಲ್ಲದಾಗ ಮನೆಗೆ ನೀನೇ ಯಜಮಾನ; ಸದ್ಯಕ್ಕೆ ಮುಖ್ಯವಾಗಿ ಸಂಪಾದಿಸುವವನೂ ನೀನೆ. ಎಲ್ಲವನ್ನೂ ನಿನಗೆ ಬಿಟ್ಟಿದ್ದೇನೆ."

ವಾಸಂತಿ. ದಾಸನ್ ಹಿಂದಿರುಗಿದರು–ನಗುತ್ತ. ಅವರ ಕೈಗಳು ಅಂಟಾಗಿದ್ದವು. ಕೊನೆಬಾರಿಗೆ ಬೀಳ್ಕೊಡಲು ರಾಮುನ್‌ನ ತಂದೆ ಅವರಿಬ್ಬರನ್ನೂ ಒಮ್ಮೊಮ್ಮೆ ಎತ್ತಿಕೊಂಡು ಕೆಳಗಿರಿಸಿದ. ಟಿಕೇಟ್ ಮಾರುವಾತ ಮಸುಕಾದ ತನ್ನ ಕಚೇರಿಯೊಳಗಿಂದ ಈಚೆಗೆ ಬಂದು ಬಸ್ ನಿಲ್ದಾಣದ ಪಕ್ಕದಲ್ಲಿ ಕಂಬಕ್ಕೆ ಕಟ್ಟಿದ ಕಬ್ಬಿಣದ ತ್ರಿಕೋನಕ್ಕೆ ಒಂದು ಕಬ್ಬಿಣದ ತುಂಡನ್ನು ಬಡಿದು ಸೂಚನೆಯ ಗಂಟೆ ಬಾರಿಸಿದ. ರಾಮುನ್‌ನ ತಂದೆ ಬಸ್ ಹತ್ತಿ ಒಂದು ಜಾಗವಿದ್ದ ಹಿಂಭಾಗಕ್ಕೆ ನಡೆದ. ಆಗಲೆ ತನ್ನ ಜಾಗದಲ್ಲಿ ಕುಳಿತಿದ್ದ ಬಸ್ ಡ್ರೈವರು ಕಿಟಕಿಯ ಹೊರಕ್ಕೆ ಕೈಚಾಚಿ ಹಾರನ್ ಒತ್ತಿದ. ಅದರ ದಪ್ಪನೆಯ ಶಬ್ದ ಇನ್ನೂ ಸುತ್ತಮುತ್ತಲಿನ ಬೆಟ್ಟಗಳಲ್ಲಿ ಪ್ರತಿಧ್ವನಿಸುತ್ತಿದ್ದಂತೆ ಬಸ್ಸಿನ ಮೋಟಾರು ಘೋರ್ಗರೆದು ಬಸ್ಸು ನಿಧಾನವಾಗಿ ಹೊರಟಿತು. ರಾಮುನ್. ವಾಸಂತಿ ಮತ್ತು ದಾಸನ್ ಬಸ್ಸಿನ ಪಕ್ಕದಲ್ಲೇ ಓಡುತ್ತ ತಂದೆಯತ್ತ ಕೈಬೀಸುತ್ತಿದ್ದರು: ತಂದೆ ಗಾಜಿಲ್ಲದ ಕಿಟಕಿಯಾಚೆ ಕೈಹಾಕಿ ಉತ್ತರಿಸಿದ. ಪೇಟೆರಸ್ತೆಯಲ್ಲಿ ಓಡಾಡುತ್ತಿದ್ದ ಕೋಳಿಗಳು. ನಾಯಿಗಳು ಮೊದಲಾದವು ದಾರಿಬಿಟ್ಟು ಪಕ್ಕಕ್ಕೆ ಹೋಗುವಂತೆ ಹಾರನ್ ಇನ್ನೂ ಕೂಗುತ್ತಿದ್ದಂತೆ ಬಸ್ಸಿನ ವೇಗ ಹೆಚ್ಚಿ ಪೇಟೆಯ ಕೊನೆಯಲ್ಲಿ ರಸ್ತೆ ತಿರುವಿನಲ್ಲಿ ತಿರುಗಿ ಕಣ್ಮರೆಯಾಯಿತು.



## ೪

ಬಸ್ಸು ಕಾಣದಾದ ಮೇಲೆ ವಾಸಂತಿ ಮತ್ತು ದಾಸನ್ ರಸ್ತೆಯ ಪಕ್ಕದಲ್ಲಿ ಕುಳಿತಿದ್ದ ತಾಯಿಯ ಬಳಿಗೋಡಿದರು. ರಾಮನ್ ಪೇಟೆ ಬೀದಿಯಲ್ಲೇ ತಿರುಗಿ ಕೆಳಕ್ಕೆ ನಡೆದು ಶಾಲಾಕಟ್ಟಡದ ಮುಂದೆ ಹಾದುಹೋಗುವ ಪಕ್ಕದ ಗಲ್ಲಿಯೊಂದಕ್ಕೆ ತಿರುಗಿದ, ಇನ್ನೂ ಶಾಲೆಗೆ ವೇಳೆಯಾಗಿರಲಿಲ್ಲ. ಆದರೆ ಮಾಸ್ತರು ಮುನುಸ್ವಾಮಿ ಅಲ್ಲಿ ಇದ್ದರೂ ಇರಬಹುದು.

ಶಾಲೆಯ ಬಾಗಿಲು ತೆರೆದಿತ್ತು. ಅನಿಶ್ಚಿತವಾಗಿಯೇ ರಾಮನ್ ಅದನ್ನು ಸಮೀಪಿಸಿದ. ಕೊಠಡಿಯೊಳಗಡೆ ಮಸುಕಾಗಿತ್ತು; ಅದಕ್ಕಿದ್ದುದು ಸಣ್ಣದಾದ ಒಂದೇ ಕಿಟಕಿ. ಒಳಗಡೆ ಹೋದ ಮೇಲೆ ಕಣ್ಣಿಗೆ ಆ ಮಸುಕು ಅಭ್ಯಾಸವಾಗಿ ಚೆನ್ನಾಗಿಯೇ ನೋಡಬಹುದು. ಹೊರಗಡೆ ಬಿಸಿಲಿನಿಂದ ಒಳಕ್ಕೆ ಬಂದ ರಾಮನ್‌ಗೆ ಕ್ಷಣಕಾಲ ಕಣ್ಣು ಕಾಣದಂತಾಯಿತು; ತಾನು ಕೊಠಡಿಯೊಳಗೆ ಸ್ವಲ್ಪ ಚೆನ್ನಾಗಿ ನೋಡಲು ಸಾಧ್ಯವಾಗುವವರೆಗೆ ಹಾಗೆಯೇ ನಿಂತ.

ಶಾಲೆಯ ಮಾಸ್ತರರು ರಾಮನ್‌ಗೆ ಬೆನ್ನು ತಿರುಗಿಸಿ ನಿಂತಿದ್ದರು. ಎಂದಿನಂತೆ ಅವರು ಬಿಳಿಯ ಬಟ್ಟೆ ಧರಿಸಿದ್ದರು. ಸೊಂಟದಿಂದ ಕಾಲಿನವರೆಗೆ ಇಳಿಬಿಟ್ಟಿದ್ದ ಬಿಳಿಯ ವೇಶ್ಟಿ, ಉದ್ದನೆಯ ಬಿಳಿಯ ಷರಟು, ನವಿರಾದ ಬಿಳಿಯ ಅಂಗವಸ್ತ್ರ ಅವರ ಪಾಂಡಿತ್ಯದ ಗೌರವಾನ್ವಿತ ಸಂಕೇತವೆಂಬಂತೆ ಭುಜದ ಮೇಲೆ ಇಳಿಬಿಟ್ಟಿತ್ತು.

ಒಂದು ದಿನ ನಾನೂ ಹೀಗೆಯೇ ಅಂಗವಸ್ತ್ರ ಹೊದೆಯುತ್ತೇನೆ ಎಂದುಕೊಂಡ ರಾಮನ್. ಬರಿಗಾಲಿನಲ್ಲಿದ್ದ ರಾಮನ್ ಸದ್ದಿಲ್ಲದೆ ಕೊಠಡಿಯೊಳಕ್ಕೆ ನಡೆದ, ಮುಂಭಾಗದಲ್ಲಿ ಗೋಡೆಯ ಮೇಲೆ ಭಾರತದ ಭೂಪಟದ ಆಕೃತಿ ರಚನೆ ಮುಗಿಸುವ ಕಾರ್ಯದಲ್ಲಿ ಮಾಸ್ತರರು ಮಗ್ನರಾಗಿದ್ದರು. "ಸಾರ್"–

ರಾಮನ್ ಮೆಲುದನಿಯಲ್ಲಿ ನುಡಿದ. ಮಾಸ್ತರಿಗೆ ಕೇಳಿಸಲಿಲ್ಲ "ಸಾರ್" ಸ್ವಲ್ಪ ಗಟ್ಟಿಯಾಗಿ ಕರೆದ,

ಚಕಿತರಾಗಿ ಮಾಸ್ತರು ಮುನುಸ್ವಾಮಿ ತಿರುಗಿ ನೋಡಿದರು "ಆ?"– ತಲೆ ತಗ್ಗಿಸಿ ಕನ್ನಡಕದ ಮೇಲ್ಭಾಗದಿಂದ ದಿಟ್ಟಿಸಿನೋಡಿ "ರಾಮನ್ ? ಇಷ್ಟು ಬೇಗ ಇಲ್ಲಿ ಏನು ಮಾಡುತ್ತಿದ್ದೀ ?" ಎಂದರು,

"ನಿಮಗೆ ತಿಳಿಸಬೇಕೆಂದು ಬಂದೆ"–ರಾಮನ್‌ನ ಗಂಟಲು ಬಿಗಿದು ಕೊಂಡಂತಾಯಿತು—"ಇನ್ನು ಮುಂದೆ ಶಾಲೆಗೆ ಬರೋಲ್ಲ".

"ಬರುವುದಿಲ್ಲವೇ ?"

"ನಮ್ಮಪ್ಪ ಬಯಲುಸೀಮೆಗೆ ಹೋಗಿದ್ದಾರೆ" ರಾಮನ್ ವಿವರಿಸಿದ, "ಮನೆಯಲ್ಲಿ ನಾನು ಸಹಾಯಕ್ಕಿರಬೇಕು."

ಮುನುಸ್ವಾಮಿ ತಲೆ ಅಲ್ಲಾಡಿಸಿದರು. "ಅನ್ಯಾಯ, ರಾಮನ್, ಶುದ್ಧ ಅನ್ಯಾಯ. ಆದರೆ ಏನೂ ಮಾಡುವುದಕ್ಕಾಗುವುದಿಲ್ಲ–ನನಗೆ ಗೊತ್ತು. ಮುಂ ದಿನ ಸಾರಿ ಮತ್ತೆ ಬರುತ್ತೀಯತಾನೇ ?"

ಮುಖವರಳಿ ರಾಮನ್ ಹೂಗುಟ್ಟಿದ. "ನಾನು ಸಂಪಾದಿಸುವ ಪ್ರತಿ ಒಂದು ರೂಪಾಯಿಯಲ್ಲೂ ಒಂದು ನಯಾಪೈಸಾ ನಾನು ಇಟ್ಟುಕೊಳ್ಳಬಹು ದೆಂದು ತಂದೆ ಹೇಳಿದ್ದಾರೆ. ಆರೀತಿ ಆಗಿಂದಾಗ್ಗೆ ನಾನು ಓದಲು ಒಂದು ಪುಸ್ತಕ ಕೊಳ್ಳಲು ಸಾಧ್ಯವಾದೀತು"

"ಒಂದು ಪುಸ್ತಕಕ್ಕೆ ಬೆಲೆ ಎಷ್ಟಾಗುತ್ತೆ ?"

"ಪುಸ್ತಕದಂಗಡಿಯ ತಂಬುಸ್ವಾಮಿ ಇಪ್ಪತ್ತೈದು ನ ಯೆ ಪೈ ಸೆ ಗೆ ಒಂದು ಪುಸ್ತಕ ಮಾರುತ್ತಾನೆ"

"ಹಾಗಾದರೆ ಒಂದು ಪುಸ್ತಕ ಕೊಳ್ಳಲು ನೀನು ಎಷ್ಟು ರೂಪಾಯಿ ಸಂಪಾದಿಸಬೇಕು ?"

"ಇಪ್ಪತ್ತೈದು"–ರಾಮನ್ ಕೂಡಲೆ ಉತ್ತರವಿತ್ತ. ಅಂದು ತಾನು ಲೆಕ್ಕದ ಪಾಠ ಹೇಳುವುದಿಲ್ಲವೆಂಬುದು ನೆನಪಿಗೆ ಬಂದಿತು, ಹಾಗೆಯೇ ಆತಂಕ ದಿಂದ ಕುಗ್ಗಿದಂತಾಯಿತು, ಇಪ್ಪತ್ತೈದು ರೂಪಾಯಿ ! ಅಷ್ಟೊಂದು ಹಣ ಗಳಿ ಸಲು ಎಷ್ಟುಕಾಲ ಬೇಕು ?

ಮಾಸ್ತರು ಮುನುಸ್ವಾಮಿ ತಲೆ ಅಲ್ಲಾಡಿಸಿ ನಕ್ಕರು. "ನೋಡು, ನೀನು

ಹೇಳಿ ಹೋಗಲು ಬಂದಾಗ ಕೂಡಾ ನಾನು ನಿನಗೆ ಲೆಕ್ಕದ ಪಾಠ ಹೇಳುತ್ತಿದ್ದೇನೆ. ಇನ್ನು ಹೋಗಿ ಬಾ. ಶಾಲೆ ಆರಂಭವಾಗುವುದರೊಳಗೆ ನನ್ನ ಕೆಲಸ ಮುಗಿಸಬೇಕು. ನೀನೂ ಕೆಲಸಕ್ಕೆ ಹೋಗಬೇಕೂಂತ ಕಾಣುತ್ತೆ"

ರಾಮನ್ ಹೊಗುಟ್ಟಿ "ನಮಸ್ಕಾರ, ಸಾರ್" ಎಂದ.

"ನಮಸ್ಕಾರ, ನೀನು ಆ ಪುಸ್ತಕಗಳನ್ನು ಓದುತ್ತಿರುವಾಗಲೇ ಸ್ವಲ್ಪ ಲೆಕ್ಕವನ್ನೂ ಅಭ್ಯಾಸಮಾಡು!"

ರಾಮನ್ ನಕ್ಕು ಕೈಯನ್ನು ಹಣೆಗಿಟ್ಟುಕೊಂಡು ವಂದಿಸಿ ಹೊರಕ್ಕೆ ನಡೆದ. ಪೇಟೆಯನ್ನು ತಲುಪಿದಾಗ ಬೆಟ್ಟದ ಮೇಲಕ್ಕೆ ಹೋಗುವ ಬದಲು ರಸ್ತೆಯಲ್ಲಿ ಕೆಳಗಡೆಗೆ ನಡೆದ. ಶಾಲೆಯ ರಸ್ತೆ ಪೇಟೆಯ ಮುಖ್ಯ ಬೀದಿ ಸೇರುವ ಜಾಗದಿಂದ ಸ್ವಲ್ಪ ಕೆಳಗಡೆಗೆ ಹಿತ್ತಾಳೆ ಪಾತ್ರೆ ಅಂಗಡಿಗೂ, ಬಟ್ಟೆ ಹೊಲಿಯುವ ಮೀರ್‌ಜಾನ್‌ನ ಅಂಗಡಿಗೂ ಮಧ್ಯೆ ಕಪಾಟುಗಳನ್ನು ಜೋಡಿಸಿದ್ದ ಸಣ್ಣ ಅಂಗಡಿಯೊಂದಿತ್ತು, ಅಲ್ಲಿ ತೆಳ್ಳನೆಯ. ಭುಜಗಳು ಬಾಗಿದ್ದ ಮುದುಕ ಕುಳಿತಿದ್ದ ಈತನೇ ಪುಸ್ತಕ -ವ್ಯಾಪಾರಿ ತಂಬುಸ್ವಾಮಿ. ಪೇಟೆಯಲ್ಲೇ ಈತ ಅತ್ಯಂತ ಅದೃಷ್ಟವಂತ ವ್ಯಾಪಾರಿಯೆಂದು ರಾಮನ್ ಭಾವಿಸಿದ.

ನಿಜವಾಗಿ ತಂಬುಸ್ವಾಮಿಯ ಅಂಗಡಿಯಲ್ಲಿ ಇದ್ದುದು ಕೆಲವೇ ಪುಸ್ತಕಗಳು. ಕಪಾಟುಗಳಲ್ಲಿ ತುಂಬಿದ್ದುದು ಹಳೆಯ, ಹರಿದಿದ್ದ ಪತ್ರಿಕೆಗಳು–ಎಲ್ಲವೂ



ಮರ್ಕಿನ್ ಮಹಿಳೆಯರು ಬಯಲು ಸೀಮೆಗೆ ಹಿಂದಿರುಗುವಾಗ ಬಿಟ್ಟುಹೋದ ಇಂಗ್ಲಿಷ್ ಪತ್ರಿಕೆಗಳು. ಈ ಪತ್ರಿಕೆಗಳನ್ನು ಯಾರು ಕೊಳ್ಳುವರೆಂದು ರಾಮನ್ ಅಚ್ಚರಿಗೊಂಡ. ಕಪಾಟುಗಳಲ್ಲಿದ್ದ ಸಂಗ್ರಹ ಕಡಿಮೆಯಾಗದೆಯೇ ಉಳಿದಿತ್ತು. ಬೆಟ್ಟದ ಜನರಲ್ಲಿ ಇಂಗ್ಲಿಷ್ ಓದುವವರು ಅಪರೂಪ.

ಮುಂಭಾಗದ ಕಪಾಟೊಂದರಲ್ಲಿ ರಾಮನ್ ಕೊಂಡಿದ್ದಂತಹ ಪುಸ್ತಕಗಳು ಕೆಲವನ್ನು ತಂಬುಸ್ವಾಮಿ ಇಟ್ಟಿದ್ದ–ತುಂಬಾ ಆಡಿಸಿ ಮಾಸಿದ್ದ, ತಮಿಳಿನಲ್ಲಿ ಮುದ್ರಿಸಿದ ತೆಳ್ಳನೆಯ ಪುಸ್ತಕಗಳು. ಭಾರತದ ಪ್ರಾಚೀನ ಭಾಷೆಯಾದ ಸಂಸ್ಕೃತ ದಿಂದ ಭಾಷಾಂತರ ಮಾಡಿದ ಪಂಚತಂತ್ರದ ಕಥೆಗಳ ಪುಸ್ತಕವೊಂದನ್ನು ಅಥವಾ ತಮಿಳು ಪದ್ಯಗಳ ಪುಸ್ತಕವೊಂದನ್ನು, ಅಥವಾ ಪುರಾತನ ಕಾಲದ ವೀರ ಯೋಧರ ಮತ್ತು ಯುದ್ಧಗಳ ಕಥೆಗಳಿದ್ದ ಪುಸ್ತಕವೊಂದನ್ನು ಇಪ್ಪತ್ತೈದು ನಯೆಪೈಸೆಗೆ ಕೊಳ್ಳಬಹುದಾಗಿತ್ತು.

ತಂಬುಸ್ವಾಮಿಯ ಅಂಗಡಿಯಲ್ಲಿ ಇನ್ನೊಂದು ಕಡೆ ಸಣ್ಣ ಮೇಜೊಂದಿತ್ತು ಅದರಲ್ಲಿ ಒಂದೆಡೆ ಗಾಜಿನ ಮುಚ್ಚಳದಡಿ ಆತ ಮಾರುತ್ತಿದ್ದ ಇತರ ವಸ್ತುಗಳು ಸೀಸದಕಡ್ಡಿಗಳು, ಬರೆಯುವ ಕಾಗದ, ಅಳಿಸುವ ರಬ್ಬರು, ಲೇಖನಿ 'ನಿಬ್'ಗಳು. ಶಾಯಿ, ಇಂಚುಪಟ್ಟಿ, ಉಕ್ತಲೇಖನ ಪುಸ್ತಕಗಳು, ಸ್ಲೇಟು ಹಲಗೆಗಳು. ಸೀಮೆ ಸುಣ್ಣದ ಚೂರುಗಳು–ಎಲ್ಲವೂ ಇದ್ದವು.



ರಾಮನ್ ಅಂಗಡಿಯ ಬಳಿಗೆ ಬಂದಾಗ ತಂಬುಸ್ವಾಮಿ ಗಾಜಿನ ಮುಚ್ಚಳವನ್ನು ಒರಸುತ್ತಿದ್ದ.

"ನಮಸ್ಕಾರ, ತಾತ". ಪೇಟೆಗೆ ಬರುತ್ತಿದ್ದ ಇತರ ಮಕ್ಕಳಂತೆ ರಾಮನ್ ಕೂಡಾ ನರೆತ ತಲೆಯ ಈ ಪುಸ್ತಕ ವ್ಯಾಪಾರಿಯನ್ನು "ತಾತ" ಎಂದೇ ಕರೆಯುತ್ತಿದ್ದ.

"ನಮಸ್ಕಾರ" ತಂಬುಸ್ವಾಮಿ ಕಣ್ಣು ಸ್ವಲ್ಪ ಮುಚ್ಚಿ ಓರೆಮಾಡಿನೋಡಿದ. ಅವನು ತಿರುಗಿದಾಗ ಹೊರಗಡೆಯ ಬಿಸಿಲು ಹೊಳೆಯಿತು. "ಆ, ರಾಮನ್ ಅಲ್ಲವೆ? ಇದೇನು ಇಷ್ಟು ಹೊತ್ತಿನಲ್ಲಿ ಬಂದೆ? ಶಾಲೆಗೆ ಹೋಗುವುದಿಲ್ಲವೆ ?

"ಈ ಹೊತ್ತಿನಿಂದ ನಾನು ಶಾಲೆಗೆ ಹೋಗುವುದಿಲ್ಲ ; ಕೆಲಸ ಮಾಡುತ್ತೇನೆ. ನಮ್ಮ ತಂದೆ ಬಯಲು ಸೀಮೆಗೆ ಹೋಗಿದ್ದಾರೆ."

ತಾನಾಡುತ್ತಿದ್ದ ಮಾತುಗಳ ಪ್ರಾಮುಖ್ಯ ಅರಿತೋ ಏನೋ ರಾಮನ್ ಸ್ವಲ್ಪ ಎತ್ತರವಾಗಿ ನಿಂತ. ಹಾಗೆಯೆ ಉತ್ಸಾಹದಿಂದ ಹೇಳಿದ: "ಇನ್ನೂ ನಿನಗೆ ಗೊತ್ತಾ ? ಅಪ್ಪ ಇಲ್ಲದಾಗ ನಾನು ಗಳಿಸುವ ಪ್ರತಿ ಒಂದು ರೂಪಾಯಿಯಲ್ಲೂ ಒಂದು ನಯಾಪೈಸಾ ನಾನು ಇಟ್ಟುಕೊಳ್ಳಬಹುದೆಂದು ಅಪ್ಪ ಹೇಳಿದ್ದಾರೆ. ಅದರಿಂದ ಪುಸ್ತಕ ಕೊಳ್ಳಲು ಸಾಕಷ್ಟು ಹಣವನ್ನು ನಾನು ಸಂಪಾದಿಸಬಹುದು."

"ರೂಪಾಯಿಗೆ ಒಂದು ನಯಾಪೈಸಾನೇ ? ಹಾಗಾದಲ್ಲಿ ನೀನು ಒಂದು ಪುಸ್ತಕ ಕೊಳ್ಳಲು ಬಹಳ ರೂಪಾಯಿಗಳನ್ನು ಗಳಿಸಬೇಕಲ್ಲಾ."

"ಓ, ನೋಡುತ್ತಿರು, ನಾನು ತುಂಬಾ ಸಂಪಾದಿಸುತ್ತೇನೆ. ಇಷ್ಟರಲ್ಲೇ ನಾನು ಇನ್ನೊಂದು ಪುಸ್ತಕ ಕೊಳ್ಳಲು ಬರುತ್ತೇನೆಂದು ನಿನಗೆ ಹೇಳಿಹೋಗಲು, ಅಷ್ಟು ಹೊತ್ತಿಗೆ ಹೊಸ ಪುಸ್ತಕಗಳೇನಾದರೂ ಬಂದಿರುತ್ತವೆಯೋ ಎಂದು ಕೇಳಲು ಈಗಬಂದೆ ಅಷ್ಟೇ."

"ನಿನಗೆ ಎಂಥ ಪುಸ್ತಕಗಳು ಬೇಕು ?" ಎಂದು ತಂಬುಸ್ವಾಮಿ ಕೇಳಿದ

"ಭಾರತದ ವೀರಪುರುಷರ ಕಥೆಗಳು. ಅಂಥ ಒಂದು ಪುಸ್ತಕ ಸಿಗುತ್ತದೆಯೋ ?"

"ಸಿಗಬಹುದು. ಸಿಗಬಹುದು" ಎಂದು ತಂಬುಸ್ವಾಮಿ ತಲೆ ಅಲ್ಲಾಡಿಸಿದ.

"ಇನ್ನು ನಾನು ಹೊರಡುತ್ತೇನೆ. ಮತ್ತೆ ಬರುತ್ತೇನೆ."

"ಹೌದು. ಬರುತ್ತೀಯೆಂದು ನಾನು ಬಲ್ಲೆ, ಒಳ್ಳೇದಾಗಲಿ. ಹೋಗಿಬಾ."

ಎಂದ ತಂಬುಸ್ವಾಮಿ.

ಬಸ್ಸು ಹೊರಟಾಗಿನಿಂದ ಎಷ್ಟು ವೇಳೆ ಕಳೆದಿದೆಯೆಂದು ಯೋಚಿಸಿ ರಾಮನ್ ಪೇಟೆ ಬೀದಿಯಲ್ಲಿ ಮೇಲಕ್ಕೆ ಧಾವಿಸಿದ. ಮೇಲುಸಿರು ಬಿಡುತ್ತ ರಸ್ತೆಯ ಕೊನೆಯಲ್ಲಿ ತರಕಾರಿ ಮಾರುವವರು ಕುಳಿತಿರುವೆಡೆಗೆ ಬಂದ. ಅವನ ತಾಯಿ ಇನ್ನೂ ಅಲ್ಲೇ ಇದ್ದು ತರಕಾರಿ ಕೊಳ್ಳಲು ಬಂದವಳೊಬ್ಬಳ ಹತ್ತಿರ ಚೌಕಾಸಿ ಮಾಡುತ್ತಿದ್ದಳು. ರಸ್ತೆಯಲ್ಲಿ ಹೋಗುವವರಿಗೆ ಅವರ ಮಾತುಗಳು ಜಗಳದಂತೆ ತೋರಬಹುದು, ಆದರೆ ಅದು ಹಾಗಲ್ಲವೆಂಬುದು ರಾಮನ್‌ಗೆ ಗೊತ್ತು. ಚೌಕಾಸಿ ಮಾಡುವುದು ಒಂದು ಪದ್ಧತಿ. ನಿರೀಕ್ಷೆಗಿಂತ ಹೆಚ್ಚಿನ ಬೆಲೆಯನ್ನು ಮಾರಾಟಗಾರರು ಹೇಳಬೇಕು, ತಾನು ಕೊಡಲು ಇಷ್ಟವಿರುವುದಕ್ಕಿಂತ ಕಡಿಮೆಯಾಗಿ ಗಿರಾಕಿ ಕೇಳಬೇಕು, ಆಮೇಲೆ ಇಬ್ಬರೂ ತುಂಬಾ ವಾದ ಮಾಡಿ ಎರಡಕ್ಕೂ ಮಧ್ಯಸ್ತವಾದ ಒಂದು ಸರಿಯಾದ ಬೆಲೆಗೆ ಒಪ್ಪುವರು. ಯಾವಾಗಲೂ ಹಾಗೆಯೇ. ಚೌಕಾಸಿಮಾಡದವರು ಸರಿಯಾದ ವ್ಯಾಪಾರಿ ಅಥವಾ ಗಿರಾಕಿ ಅಲ್ಲ!

ಒಂದು ಒಪ್ಪಿಗೆಯಾಗಿ ಗಿರಾಕಿ ಹೊರಟುಹೋಗುವವರೆಗೆ ಕಾದಿದ್ದು ರಾಮನ್ ತಾಯಿಯ ಬಳಿಸಾರಿದ. ತಾಯಿಯ ಪಕ್ಕದಲ್ಲಿ ನೆಲದ ಮೇಲೆ ಹಾಸಿದ್ದ ಬಟ್ಟೆಯೊಂದರ ಮೇಲೆ ಚಿಕ್ಕಮಗು ಮಲಗಿ ನಿದ್ರಿಸುತ್ತಿತ್ತು. ಸ್ವಲ್ಪ ದೂರದಲ್ಲಿ ದಾಸನ್, ವಾಸಂತಿ ಆಟವಾಡುತ್ತಿದ್ದರು. ಅವರು ಇನ್ನು ಕೆಲವು ರೋಲಿ–ಪುಚ್ಚಿಗಳನ್ನು ಸಂಗ್ರಹಿಸಿ ಅವುಗಳೊಡನೆ ಗೋಲಿಗಳಂತೆ ಆಡುತ್ತಿದ್ದರು.

"ಆ, ರಾಮನ್! ನೀನು ಬಂದಿದ್ದು ಒಳ್ಳೆಯದೇ ಆಯಿತು." ಅದೇ ತಾನೆ ಪಡೆದಿದ್ದ ದುಡ್ಡನ್ನು ಸೊಂಟದಲ್ಲಿ ಸೀರೆಯ ಮಡಿಕೆಯೊಂದಕ್ಕೆ ಹಾಕುತ್ತ ತಾಯಿ ಹೇಳಿದಳು. "ವಾಸಂತಿಯನ್ನು ಕರೆದುಕೊಂಡು ನೀನು ಮನೆಗೆ ಹೋಗು. ಈಗಲೂ ಸ್ವಲ್ಪ ಅಣಬೆಯೇನಾದರೂ ಸಿಕ್ಕರೆ ಮಧ್ಯಾಹ್ನ ಅವನ್ನು ನೀನು ಮಾರಬಹುದು. ಕೆರೆಯ ಆ ಕಡೆ ಕೆಲ ಮನೆಗಳಲ್ಲಿ ಜನ ಇನ್ನೂ ಇದ್ದಾರೆಂದು ಕೇಳಿಗೆ. ಅಣಬೆಯನ್ನು ಮಾರಲು ಆಗದಿದ್ದರೆ ಮನೆಗೆ ತಂದುಬಿಡು. ಒಣಗಿಸೋಣ."

"ದಾಸನ್‌ನನ್ನೂ ಒಯ್ಯಲೇನಮ್ಮಾ?"

"ಬೇಡ. ಅವನು ಇಲ್ಲೇ ನನ್ನ ಜತೆಯಲ್ಲಿರಲಿ. ನೀವಿಬ್ಬರೇ ಇದ್ದರೆ

ಹೆಚ್ಚು ಅರಿಸಬಹುದು, ಇದೋ ಇದನ್ನು ತೆಗೆದುಕೋ." ಮೂರು ಸಣ್ಣ ಬಾಳೆಹಣ್ಣುಗಳನ್ನು ಆಕೆ ಅವನ ಕೈಗಿತ್ತಳು, "ವಾಸಂತಿಗೊಂದು. ದಾಸನ್ ಗೊಂದು ಕೊಡು. ದಾಸನ್‌ಗೆ ಈಗ ಇರುವಲ್ಲೇ ಆಡುತ್ತಿರಬೇಕೆಂದೂ ರಸ್ತೆಯಂಚಿಗೆ ಹೋಗಬಾರದೆಂದೂ ಹೇಳು, ನಾನು ಮಧ್ಯಾಹ್ನದವೇಳೆಗೆ ಮನೆಗೆ ಬರಲಿಕ್ಕಾದೀತು. ಊಟಕ್ಕೆ ಅನ್ನ ಮೆಣಸಿನಸಾರು ಮಾಡೋಣ"

ರಾಮನ್ ಬಾಳೆಯ ಹಣ್ಣುಗಳನ್ನು ಹಿಡಿದು ಮಕ್ಕಳಿಬ್ಬರೂ ಆಡುತ್ತಿದ್ದಲ್ಲಿಗೆ ನಡೆದ; ಕೂಡಲೆ ಅವನು, ವಾಸಂತಿ ಮನೆಗೆ ಹೊರಟರು. ಬೆಟ್ಟದ ದಾರಿಯಲ್ಲಿ ನಡೆದಿದ್ದಂತೆಯೇ ರಾಮನ್ ಪಕ್ಕಕ್ಕೆ ಕತ್ತು ತಿರುಗಿಸಿ ಬೆಟ್ಟದ ತುದಿಯ ಹಾದಿ ಎಡಕ್ಕೆ ತಿರುಗುವ ಕಡೆಗೆ ನೋಡಿದ, ಆ ಹಾದಿಯಲ್ಲಿ ನಡೆದು ಮುಂದಕ್ಕೆ ಚಾಚಿದ ಬಂಡೆಯ ಮೇಲೆ ಕುಳಿತು ಬಯಲು ಸೀಮೆ ದಿಟ್ಟಿಸುತ್ತ ಹಿಂದಿನಕಾಲದ ಆ ಭವ್ಯವಾದ ಸೇನೆಗಳನ್ನು ಮನದಲ್ಲೇ ಚಿತ್ರಿಸಿಕೊಳ್ಳುತ್ತ ಕೂಡುವುದಾದರೆ ಎಷ್ಟು ಸೊಗಸು. ಆದರೆ ಮತ್ತೆ ತಾನು ಆ ಬಂಡೆಯ ಮೇಲೆ ಕೂಡಲು ಬಹುದಿನ ಬೇಕು. ಈ ಯೋಚನೆಯಿಂದ ದೂರವಾಗಲೋ ಎಂಬಂತೆ ರಾಮನ್ ಸರ ಸರನೆ ಮುಂದಕ್ಕೆ ನಡೆದ. ಅವನ ಜತೆಯಲ್ಲಿ ನಡೆಯುವುದು ಕಷ್ಟವಾಗಿ ವಾಸಂತಿ ಕೂಗಿ ಕರೆದಳು.

"ಅಣ್ಣಾ, ಅಣಬೆ ಅರಿಸಲು ಎಲ್ಲಿಗೆ ಹೋಗೋಣ?"

ಮತ್ತೆ ಅವನ ಪಕ್ಕಕ್ಕೆ ಬಂದಾಗ ವಾಸಂತಿ ಕೇಳಿದಳು.

"ಪೈನ್ ತೋಪಿಗೋ. ತೋಟದ ಮೇಲಿನ ಬೆಟ್ಟಕ್ಕೋ. ಕೆರೆಯ ಆಚೆಕಡೆಗೋ ಹೋಗೋಣ." ರಾಮನ್ ವಿಮುಖತೆಯಿಂದಲೇ ಉತ್ತರವಿತ್ತ.

"ಪೈನ್ ತೋಪಿಗೇ ಹೋಗೋಣ. ಕಳೆದ ಸಾರಿ ನಾನು ಅಲ್ಲಿ ಬಹಳ ಅಣಬೆಗಳನ್ನು ಕಂಡೆ" ರಾಮನ್ ಏನೂ ಹೇಳದಿದ್ದುದನ್ನು ಕಂಡು ವಾಸಂತಿ ಲಜ್ಜೆಯಿಂದ ಅವನತ್ತ ನೋಡಿ "ರಾಮನ್. ನೀನು ಶಾಲೆ ಬಿಡಬೇಕಾಗಿ ಬಂದದ್ದು ಬಹಳ ತಪ್ಪು. ನನಗೆ ವ್ಯಸನವಾಗುವುದು." ಎಂದಳು.

ರಾಮನ್ ನೇರವಾಗಿ ಮುಂದೆ ನೋಡಿ "ಹಾಗೇನಿಲ್ಲ. ಮುಂದಿನ ಸಲ ಮತ್ತೆ ಶಾಲೆಗೆ ಹೋಗುತ್ತೇನೆ"ಎಂದ.

"ನೀನೇ ಅದೃಷ್ಟವಂತ ರಾಮನ್. ನಿನಗೆ ಓದಲು ಬರುತ್ತದೆ. ನನಗೂ ಬರಬಾರದಿತ್ತೇ ಅನ್ನಿಸುವುದು.'' ವಾಸಂತಿಯ ದನಿಯಲ್ಲಿ ಆಶಾಭಾವನೆಯಿತ್ತು.

ಅಚ್ಚರಿಗೊಂಡು ರಾಮನ್ ತಂಗಿಯತ್ತ ನೋಡಿದ. ವಾಸಂತಿಗೆ ಓದಲು ಆಸೆ. "ಹುಡುಗಿಯರಿಗೆ ಶಾಲೆ ಅಗತ್ಯವಿಲ್ಲ'' ಎಂದು ಸ್ವಲ್ಪ ಮೂಗು ಮುರಿದಂತೆಯೇ ಹೇಳಿದ.

"ನನಗೆ ಗೊತ್ತು, ಅವರಿಗೆ ಅಡಿಗೆ ಮಾಡಿ ಮನೆ ನೋಡಿಕೊಳ್ಳುವುದು ಬಂದರೆ ಸಾಕು" ಎಷ್ಟೋ ಸಲ ತಾನು ಕೇಳಿದ್ದ ಮಾತುಗಳನ್ನೇ ವಾಸಂತಿ ಮತ್ತೆ ಉಚ್ಚರಿಸಿ ನಿಟ್ಟುಸಿರಿಟ್ಟಳು.

ಅನ್ಯಾಯ ಎಂದುಕೊಂಡ ರಾಮನ್ ಅವನ ಮನದಲ್ಲಿ ಸಹಾನುಭೂತಿ ಉಕ್ಕಿಬಂದಿತು. ಆದರೇನು ಮಾಡುವುದು,

ಆ ಯೋಚನೆಯಿಂದ ರಾಮನ್ ವಿಮುಖನಾದ, ಈಗ ಅವರು ಬೆಟ್ಟದ ಶಿಖರ ದಾಟಿ ಬಂದಿದ್ದರು. ರಸ್ತೆ ಎಡಗಡೆಗೆ ಕೆಳಕ್ಕೆ ಸಾಗಿತ್ತು. ಹಠಾತ್ತನೆ ರಾಮನ್ ಮುಂದಕ್ಕೆ ವೇಗವಾಗಿ ಓಡಲಾರಂಭಿಸಿ ''ತಂಗಚ್ಚಿ ಯಾರು ಮೊದಲು ಮನೆ ತಲಪುತ್ತಾರೋ ನೋಡೋಣ" ಎಂದು ಕೂಗಿ ಕರೆವ,

ತನ್ನಲ್ಲಿ ಮೂಡಿದ್ದ ಆಶಾಭಾವನೆ ಕಳೆದು ವಾಸಂತಿ ನಕ್ಕು ಅವನ ಹಿಂದೆ ಓಡಿದಳು. ಅವಳು ಓಡುತ್ತಿದ್ದಂತೆ ಅವಳ ಕೈಗಳಲ್ಲಿದ್ದ ಗಾಜಿನ ಬಳೆಗಳು ಕಿಣಿ ಕಿಣಿ ಶಬ್ದ ಮಾಡಿದವು.



## ೫

ಸಂಜೆ ಊಟವಾದಮೇಲೆ ರಾಮನ್ ಮೌನವಾಗಿ ಮನೆಬಾಗಿಲಲ್ಲಿ ಹಿಂದಿನ ರಾತ್ರಿ ತನ್ನ ತಂದೆ ಕುಳಿತಿದ್ದಲ್ಲಿ ಒರಟು ಗೋಡೆಗೆ ಒರಗಿ ಕುಳಿತು ಆಕಾಶವತ್ತ ದಿಟ್ಟಿಸಿದ. ಆಕಾಶ ನಿರ್ಮಲವಾಗಿತ್ತು, ತಣ್ಣಗೆ ಗಾಳಿ ಬೀಸುತ್ತಿತ್ತು. ಮೊದಲು ನಕ್ಷತ್ರಗಳು ಮಸುಕು ಮಸುಕಾಗಿ ಮಿನಗುತ್ತಿದ್ದವು. ಕಣ್ಣ ಅಂಚಿನಿಂದ ಅವನು ಅವುಗಳನ್ನು ನೋಡಬಹುದಾಗಿತ್ತು. ಆದರೆ ಅವನು ನೇರವಾಗಿ ಅವುಗಳತ್ತ ನೋಡಿದಾಗ ಅವು ಆಕಾಶದ ನೀಲಿ–ಬೂದು ಬಣ್ಣದಲ್ಲಿ ಲೀನವಾಗಿಹೋದವು.

ವಾಸಂತಿ ಸನಿಹದಲ್ಲೇ ಕುಳಿತು ಮಧ್ಯಾಹ್ನ ಮಾರಾಟವಾಗದೆ ಉಳಿದಿದ್ದ ಅಣಬೆಗಳನ್ನು ಒಂದು ದಾರಕ್ಕೆ ಪೋಣಿಸುತ್ತಿದ್ದಳು. ಮಾರನೇ ದಿನ ಅವನ್ನು ಬಿಸಿಲಲ್ಲಿ ಒಣಗಲು ತೂಗುಹಾಕಲಾಗುತ್ತಿತ್ತು. ಒಣಗಿದ ಅಣಬೆಯನ್ನು ಗಿರಾಕಿ ಸಿಗುವವರೆಗೂ ಇಟ್ಟಿರಬಹುದು.

ರಾತ್ರಿ ಮಗುವನ್ನು ಮಲಗಿಸುವುದರಲ್ಲಿ ತೊಡಗಿದ್ದ ತಾಯಿ ಹೊರಕ್ಕೆ ಬಂದು ನೋಡಿ "ವಾಸಂತಿ,ಮಲಗಲು ನಿನಗೂ ವೇಳೆಯಾಯಿತು. ದಾಸನ್ ಆಗಲೆ ನಿದ್ದೆಹೋದ" ಎಂದಳು.

"ಹೋಗ್ತೀನಮ್ಮಾ"–ಲಂಗ ಕೊಡವಿಕೊಳ್ಳುತ್ತ ವಾಸಂತಿ ಮೇಲಕ್ಕೆದ್ದಳು. "ಅಣಬೆ ಆಗಲೆ ಒಣಗುತ್ತಿದೆ "ಎನ್ನುತ್ತ ಅವಳು ಅಣಬೆ ಸರಗಳನ್ನು ತಾಯಿಯ ಕೈಗಿಟ್ಟು ಮನೆಯೊಳಕ್ಕೆ ಹೋದಳು,

ಮನೆಯ ಪಕ್ಕದ ಗೋಡೆಯಲ್ಲಿ ಮುಂದಕ್ಕೆ ಚಾಚಿದ್ದ ದೂಲಗಳಲ್ಲೊಂದಕ್ಕೆ ಹೊಡೆದಿದ್ದ ಮೊಳೆಗಳಿಗೆ ಅಣಬೆಯನ್ನು ನೇತುಹಾಕಿ ತಾಯಿ ಹಿತ್ತಾಳೆಯ ಅನ್ನದ ಪಾತ್ರೆ ತೊಳೆಯಲು ರಾಮನ್‌ನಿಂದ ತುಸ ದೂರವಲ್ಲಿ ಕುಳಿತು ಸುಟ್ಟು ಕಪ್ಪಾಗಿದ್ದ ಭಾಗವನ್ನು ಮರಳು ಮತ್ತು ಬೂದಿಯಿಂದ ಉಜ್ಜಲಾರಂ

ಭಿಸಿವಳು. ಆಕೆಯೊಡನೆ ಮಾತನಾಡಲು ಇಚ್ಛಿಸಿ ರಾಮನ್ ಆಕೆಯತ್ತ ನೋಡಿದ. ಮುಖ್ಯವಾಗಿ ತಾನು ಗಳಿಸಿದ ಪ್ರತಿ ರೂಪಾಯಿನಲ್ಲಿ ಒಂದು ನಯಾ ಪೈಸಾ ತಾನಿಟ್ಟುಕೊಳ್ಳಬಹುದೆಂಬ ತಂದೆಯ ವಚನ ಕುರಿತು ಮಾತಾಡಲು ಅವನು ಆಸಕ್ತನಾಗಿದ್ದ. ತಾಯಿ ಇದನ್ನು ಪ್ರಸ್ತಾಪಿಸಿರಲಿಲ್ಲ, ಆದರೆ ತಾವು ಆಕೆಯೊಡನೆ ಮಾತಾಡಿರುವುದಾಗಿಯೂ, ಆಕೆ ಒಪ್ಪಿರುವಳೆಂದೂ ತಂದೆ ತನಗೆ ತಿಳಿಸಿದ್ದರು, ಪ್ರಾಯಶಃ ಮನಸ್ಸಿಲ್ಲದೆ ಆಕೆ ಒಪ್ಪಿರಬೇಕು, ಏಕೆಂದರೆ ತಂದೆ ಹೇಳಿದ್ದನ್ನಲ್ಲ:" ಆಕೆಗೆ ಅಷ್ಟು ಚೆನ್ನಾಗಿ ತಿಳಿಯದು". ತನ್ನಲ್ಲಿ ಮೂಡಿದ್ದ ಹೆಮ್ಮೆ–ಆವೇಗಗಳ ಬಗ್ಗೆ ಆಕೆಗೆ ತಿಳಿಸಲು ಅವನು ಬಯಸಿದ. ಆದರೆ ಅದೇಕೋ ಮಾತನಾಡಲಾಗಲಿಲ್ಲ; ಎಂದಿನಂತೆ ಪ್ರಶಾಂತವಾಗಿ, ಮೌನವಾಗಿ ಇದ್ದ ಆಕೆಯ ಮುಖ ತುಂಬಾ ದೂರವಿದ್ದಂತೆ ಭಾಸವಾಯಿತು.

ಬೆಟ್ಟದ ಜನರಲ್ಲಿ ತನ್ನ ತಾಯಿ ಸ್ವಲ್ಪ ಹೆಚ್ಚು ಎತ್ತರವಾಗಿದ್ದಳು. ಆಕೆ ಕಪ್ಪನೆಯ ಕೂದಲನ್ನು ಬಿಗಿದು—ಹಣೆ ಮತ್ತು ಕೆನ್ನೆಗಳ ಚರ್ಮ ಸೆಳೆಯುವಷ್ಟು ಬಿಗಿಯಾಗಿ–ಹಿಂದೆ ಗಂಟು ಹಾಕಿದ್ದಳು. ಕತ್ತಿನ ಮೇಲಿದ್ದ ಆ ಗಂಟು ಕೂದಲಿಗೆ ಕೊಬರಿ ಎಣ್ಣೆ ಹಚ್ಚಿದ್ದುದರಿಂದ ನವಿರಾಗಿದ್ದು ಹೊಳೆಯುತ್ತಿತ್ತು. ಹಳೆಯದಾಗಿದ್ದರೂ ಆಕೆಯ ಸೀರೆಯ ಮುಂಭಾಗದ ನೆರಿಗಳು, ಒಂದು ಭುಜದಿಂದ ಹಿಂದಕ್ಕೆ ಇಳಿಬಿಟ್ಟಿದ್ದ ಉದ್ದನೆಯ ಸೆರಗು ಎಲ್ಲವೂ ಒಪ್ಪವಾಗಿದ್ದವು, ತಲೆಯ ಮೇಲೆ ತರಕಾರಿ ಬುಟ್ಟಿ ಹೊತ್ತು ಪೇಟೆಗೆ ನಡೆದಾಗಿನಂತೆ ಆಕೆಯ ನೆರಿಗೆ ಸದಾ ಅಂದವಾಗಿ, ಗಂಭೀರವಾಗಿ ಇತ್ತು.

ಪುಟ್ಟ ಹುಡುಗನಾಗಿದ್ದಾಗ ತಾನು ಅದೆಷ್ಟು ಬಾರಿ ಹೀಗೆ ಕುಳಿತು ತನ್ನ ಕೆಲಸದಲ್ಲಿ ತೊಡಗಿದ್ದ ತಾಯಿಯನ್ನು ನೋಡುತ್ತ ಕಾಲ ಕಳೆದಿರಲಿಲ್ಲ, ಯಾವಾಗಲೂ ಆಕೆ ಈಗಿದ್ದಂತೆಯೇ ಕಂಡುಬರುತ್ತಿದ್ದಳು–ಆದರೆ–ಅವನು ಹಿಂದಿನದನ್ನು ಜ್ಞಾಪಿಸಿಕೊಳ್ಳುತ್ತ ತಲೆ ಕೆರೆದುಕೊಂಡ. ಹೌದು, ಏನು ವ್ಯತ್ಯಾಸ? ಹಾ! ಅದೇ, ತಾಯಿಯ ಮೂಗಿನ ಮೇಲೆ ಹೊಳೆಯುತ್ತಿದ್ದ ಹರಳುಗಳ ಮೂಗುಬೊಟ್ಟು ಕಾಣುತ್ತಿತ್ತು. ಆಕೆ ಓಡಾಡುತ್ತಿದ್ದಾಗ ಮೂಗುಬೊಟ್ಟು ಪ್ರಕಾಶಿಸುತ್ತಿತ್ತು. ಆಗ್ಗೆ ಆಕೆಯನ್ನು ನೋಡುತ್ತ ರಾಮನ್ ತನ್ನ ತಾಯಿ ಸುಂದರ ವ್ಯಕ್ತಿಯೆಂದು ಅಂದುಕೊಳ್ಳುತ್ತಿದ್ದ. ಇಂದೂ ಆಕೆ ಹಾಗೆಯೇ ಇದ್ದಳು, ಅದರಲ್ಲೂ ಆಕೆ ನಕ್ಕಾಗ ಸುಂದರವಾಗಿ ಕಾಣುತ್ತಿದ್ದಳು. ಆದರೆ ಅದು ಈಗ ಅಪರೂಪವೇ.

ತಾನು ತಾಯಿಯ ಮೂಗುತಿ ನೋಡಿ ತುಂಬಾ ದಿನವಾಯಿತೆಂದು ರಾಮನ್‌ನ ಮನಸ್ಸಿಗೆ ಹೊಳೆಯಿತು. ಮಗು ಹುಟ್ಟುವುದಕ್ಕೆ ಮುಂಚಿನಿಂದಲೇ ಇರಲಿಲ್ಲವೆ ? ಇಲ್ಲ, ಅದಕ್ಕೂ ಮುಂಚಿನಿಂದ ಇರಲಿಲ್ಲ. ಮೂಗುತಿಯಿದ್ದ ಮೂಗಿನ ಆ ಪುಟ್ಟ ರಂಧ್ರ ಈಗ ಕಾಣಿಸುತ್ತಲೇ ಇರಲಿಲ್ಲ. ಎಷ್ಟು ವಿಚಿತ್ರ, ಇದುವರೆಗೆ ತಾನು ಈ ಒಡವೆ ಇಲ್ಲದುದನ್ನು ಗಮನಿಸಿಯೇ ಇರಲಿಲ್ಲ! ಅದೇನು ಕಳೆದುಹೋಯಿತೆ ? ಇಲ್ಲ. ಹಾಗಿದ್ದರೆ ತಿಳಿಯುತ್ತಿತ್ತು. ತಾಯಿ ಅದನ್ನು ಗುಟ್ಟಾಗಿ ಬಚ್ಚಿಡುವುದಿಲ್ಲ. ಒಡವೆ ರಕ್ಷಿಸಲು ಅತ್ಯಂತ ಸುರಕ್ಷಿತ ಕ್ರಮ ಅವನ್ನು ಧರಿಸಿರುವುದೇ ಎಂದು ಎಲ್ಲರಿಗೂ ಗೊತ್ತು. ಯಾವ ವರ್ಷವೋ ಚಳಿಗಾಲದಲ್ಲಿ ಹಣ. ಅಕ್ಕಿ ಇಲ್ಲದಿದ್ದಾಗ ಮೂಗುತಿಯನ್ನು ಮಾರಿಬಿಟ್ಟಿರಬೇಕು.

ಹಣ ಮತ್ತು ಅಕ್ಕಿ. ಅವೆರಡು ಪದಗಳು ರಾಮನ್‌ನ ಮನವನ್ನು ಪ್ರಕೃತ ಯೋಚನೆಗಳಿಗೆ ತಿರುಗಿಸಿದವು. ಈ ಹೊತ್ತು ಒಂದು ಬುಟ್ಟಿ ಪೂರ್ತಿ ಅಣಬೆಯಿಂದ ತಾನು, ವಾಸಂತಿ ಕೇವಲ ಇಪ್ಪತ್ತೈದು ನಯೆಪೈಸೆ ಗಳಿಸಲು ಸಾಧ್ಯವಾಯಿತು. ತಾಯಿ ಅರ್ಧಕ್ಕರ್ಧ ತರಕಾರಿಯನ್ನು ಮಾರಾಟವಾಗದೆ ಹಿಂದಕ್ಕೆ ತಂದಿದ್ದಳು. ನಾಳೆ ಬೆಳಿಗ್ಗೆ ಊಟಕ್ಕೆ ಬರೀ ಅನ್ನ ಮಾತ್ರ ಇರುತ್ತ ದೆಂದು ರಾಮನ್‌ಗೆ ಗೊತ್ತು. ದೋಸೆ ಮಾಡಲು ಬೇಕಾದ ಬೇಳೆ ಕೊಳ್ಳುವಷ್ಟು ಹಣವಿರಲಿಲ್ಲ.

ತಮ್ಮ ಆ ಸಣ್ಣ ತೋಟದಲ್ಲಿ ಬೆಳೆಯುವ ತರಕಾರಿ ವರ್ಕಿನ್ ಜನ ಬಳ ಸುವಂತಹವು. ಯಾವಾಗಾದರೊಮ್ಮೆ ಮನೆಯಲ್ಲಿ ಹಣ. ಇಲ್ಲದಿದ್ದಾಗ, ಅಕ್ಕಿ ಬಹು ಸ್ವಲ್ಪವಿದ್ದಾಗ ತಾವೆಲ್ಲ ಮಾರಾಟವಾಗದುಳಿದಿದ್ದ ಕೆಂಪು ಮೂಲಂಗಿ, ಬಟಾಣಿ ಮತ್ತು ಇತರ ಕಾಳುಗಳನ್ನು ತಿಂದಿದ್ದುದುಂಟು. ಆದರೆ ಈ ತರಕಾರಿ ಗಳೆಲ್ಲ ದಕ್ಷಿಣ ಭಾರತೀಯ ಅಡಿಗೆಗೆ ಒಗ್ಗುವುದಿಲ್ಲ. ತಮಗೆ ಮುಖ್ಯವಾಗಿ ಬೇಕಾದುದು ಅನ್ನ, ಬಿಸಿಯಾದ ಬಿಳಿಯ ಬಣ್ಣದ ಅನ್ನ, ಹಸಿಮೆಣಸಿನ ಸಾರು.

ಆಹಾರದ ವಿಷಯ ಯೋಚಿಸುತ್ತಿದ್ದಂತೆ ರಾಮನ್ ತನಗೆ ಮತ್ತೆ ಹಸಿ ವಾಗುತ್ತಿದೆಯೆನಿಸಿತು. ಆ ಹೊತ್ತಿಗೆ ದಾರಿಯಲ್ಲಿ ಹೆಜ್ಜೆಗಳ ಸಪ್ಪಳ ಕೇಳಿಸಿತು, ಆ ನಡಿಗೆ ಶಬ್ದವನ್ನು ರಾಮನ್ ಗುರುತಿಸಿದ. ಅದು ತಮ್ಮ ದೊಡ್ಡಪ್ಪನದು— ತಂದೆಯ ಅಣ್ಣ. ಆತನಿಗೆ ಸ್ವಲ್ಪ ಕುಂಟು,

ಮರುಗಳಿಗೆಯಲ್ಲೇ ದೊಡ್ಡಪ್ಪ ಮನೆಯ ಪಕ್ಕದಿಂದ ಈಕಡೆ ತಿರುಗಿ ಕಾಣಿಸಿಕೊಂಡ, ಮಾಮೂಲು ಕುಶಲ ಸಂಭಾಷಣೆಯಾಯಿತು.

"ಹೂಂ! ಏನೋ ನನಗೂ ವೈಚೆನ್ನಾಗಿಲ್ಲ." ರಾಮನ್‌ನ ತಾಯಿ ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ದೊಡ್ಡಪ್ಪ ತಲೆಅಲ್ಲಾಡಿಸಿದ.

"ಕಣ್ಣು ತುಂಬಾ ಕೆಟ್ಟಿದೆ. ಅದೇನಾಗಿದೆಯೋ. ಏನು ಮಾಡಬೇಕೊ ತಿಳಿಯದು. ನಗರವಲ್ಲಿರುವ ನನ್ನ ಮಗನಿಂದ ಈ ಹೊತ್ತು ಕಾಗದ ಬಂದಿತು; ಆದರೆ ನಾನು ಅದನ್ನು ಓದಲಾರೆ"

ಆತ ಸ್ವಲ್ಪ ಹೊತ್ತು ಸುಮ್ಮನಿದ್ದ. ರಾಮನ್‌ನ ತಾಯಿ ಥಟ್ಟನೆ "ಅದನ್ನು ರಾಮನ್ ಓದಿಕೊಳ್ಳುತ್ತಾನೆ. ಆದರೆ ಇಲ್ಲಿ ದೀಪವಿಲ್ಲವಲ್ಲಾ" ಎಂದಳು.

"ನಮ್ಮ ಮನೆಯಲ್ಲಿ ಒಂದು ದೀಪ ಇದೆ. ಅವನು ಬರುವುದಾದರೆ...." ರಾಮನ್‌ನ ದೊಡ್ಡಪ್ಪ ಹೇಳಿದ.

"ಓ, ಅದಕ್ಕೇನು? ಹಾಗೇ ಆಗಲಿ?" ಎಂದು ಆಕೆ ಒಪ್ಪಿದಳು.

ರಾಮನ್ ಎದ್ದು ದೊಡ್ಡಪ್ಪನನ್ನು ಹಿಂಬಾಲಿಸಿ ತಮ್ಮ ಮನೆಯಿಂದ ಮೇಲುಗಡೆಯ ಇಳಿಜಾರಿನಲ್ಲಿದ್ದ ಅವರ ಮನೆಗಾಗಿ ಕಣಿವೆಯ ಪಕ್ಕದ ಹಾದಿಯಲ್ಲಿ ನಡೆದ. ಇದೇ ತಾನೆ ನಡೆದಿದ್ದಂತಹ ದೃಶ್ಯ ಒಂದು ನಾಟಕದಂತೆ ಆಗಿಂದಾಗ್ಗೆ ನಡೆಯುತ್ತಲೇ ಇತ್ತು. ನಟರೆಲ್ಲರಿಗೂ ತಂತಮ್ಮ ಪಾತ್ರಗಳು ತಿಳಿದಿದ್ದವು. ಈ ನಟನೆಯಲ್ಲಿ ಕೃತಕ ಎಂಬುದೂ ಗೊತ್ತಿತ್ತು. ರಾಮನ್, ಅವನ ತಾಯಿ, ದೊಡ್ಡಪ್ಪ ಎಲ್ಲರಿಗೂ ಅದು ಗೊತ್ತು; ಆದರೆ ಯಾರೂ ಆ ಬಗ್ಗೆ ಮಾತಾಡುತ್ತಿರಲಿಲ್ಲ.

ಇಬ್ಬರೂ ಒಂದು ಕೋಣೆಯ ಆ ಜೋಪಡಿ ತಲಪಿದರು. ರಾಮನ್‌ನ ಮನೆಯಂತೆಯೇ ಇತ್ತು. ದೊಡ್ಡಪ್ಪ ಕತ್ತಲಲ್ಲೇ ಹುಡುಕಾಡಿ ಎಣ್ಣೆ ಬುಡ್ಡಿಯ ದೀಪವೊಂದನ್ನು ಹೊತ್ತಿಸಿದ. ಇಬ್ಬರೂ ನೆಲದ ಮೇಲೆ ಪದ್ಮಾಸನ ಹಾಕಿ ಕುಳಿತರು, ರಾಮನ್ ಕಾಗದವನ್ನು ದೀಪಕ್ಕೆ ಆದಷ್ಟು ಹತ್ತಿರವಾಗಿ ಹಿಡಿದಿದ್ದ.

ದೊಡ್ಡಪ್ಪನ ಮಗನಿಗೆ ಬರೆಯಲು ಬಾರದು, ಬರೆಯಬಹುದಾದ ಸ್ನೇಹಿತರಾರರೋ ಅವನಿಗೆ ಸಿಕ್ಕಿರಬೇಕು; ಅಥವಾ ಪೇಟೆಯಲ್ಲಿನ ಕಾಗದ ಬರೆಯುವವನಿಗೆ ಸ್ವಲ್ಪ ಹಣಕೊಟ್ಟು ಬರೆಸಿರಬೇಕು. ಬರವಣಿಗೆ ಒತ್ತೊತ್ತಾಗಿ,



ಏರುಪೇರಾಗಿ ಇತ್ತು. ಅದನ್ನು ಅರ್ಥಮಾಡಿಕೊಳ್ಳಲು ರಾಮನ್‌ಗೆ ತ್ರಾಸವಾಯಿತು.ಕೊನೆಗೆ ಕಾಗದ ಓದಿ ಮುಗಿಸುವವೇಳೆಗೆ ಮಂದವಾದ ಬೆಳಕು ನೋಡಲು ಪ್ರಯತ್ನಿಸಿ ಕಣ್ಣೆಲ್ಲಾ ನೋವು ಬಂದಿತ್ತು,

ದೊಡ್ಡಪ್ಪ ತಲೆ ಅಲ್ಲಾಡಿಸಿ ಕಾಗದವನ್ನು ಮತ್ತೆ ತೆಗೆದುಕೊಂಡು ಮಡಿಸಿಟ್ಟುಕೊಂಡ.

"ಉಪಕಾರವಾಯಿತು. ರಾಮನ್, ನಾಳೆ. ಪತ್ರಕ್ಕೆ ಉತ್ತರಿಸುತ್ತೇನೆ"

"ನಾನು ಸಂಜೆ ಬರುತ್ತೇನೆ" ಎಂದ ರಾಮನ್. ಅವನಿಗೆ ಹೇಳದೆಯೇ ಗೊತ್ತಿತ್ತು. ಉತ್ತರ ಬರೆಯಲು ತಾನು ಬರಬೇಕೆಂದು ದೊಡ್ಡಪ್ಪನ ಇಷ್ಟ. ರಾಮನ್ ಎದ್ದು ಹೊರಡಲನುವಾದ.

ದೊಡ್ಡಪ್ಪನೂ ಎದ್ದು ಬಾಗಿಲವರೆಗೆ ಬಂದ. ಕ್ಷಣಕಾಲ ಇಬ್ಬರೂ ತಲೆ ಬಾಗಿಲಲ್ಲಿ ನಿಂತರು. ದೊಡ್ಡಪ್ಪನ ಮನೆಯಿಂದ ಮೇಲಕ್ಕೆ ದೂರದಲ್ಲಿ ಸಣ್ಣಗೆ ಬೆಂಕಿ ಕಾಣಿಸಿತು, ಅದರ ಸುತ್ತ ಜನ ಓಡಾಡುತ್ತಿದ್ದರು. ಅವರ ನಗು ಇಲ್ಲಿಗೆ ಕೇಳಿಸುತ್ತಿತ್ತು.

"ನೋಡು. ತಾತ ನಟೇಶನ್‌ನ ಗೋಷ್ಠಿಗೆ ಸೇರಲು ನಿನಗೆ ಇನ್ನೂ ವೇಳೆಯಿದೆ" ಎಂದು ದೊಡ್ಡಪ್ಪ ಅತ್ತ ಕೈಮಾಡಿ ಹೇಳಿದ.

ರಾಮನ್ ಅನ್ಯಮನಸ್ಕನಾಗಿ "ಈರಾತ್ರಿ ನಾನು ಹೋಗುವುದಿಲ್ಲ, ಈವೊತ್ತು ನನಗೆ ಆಯಾಸವಾಗಿದೆ. ಬೆಳಗ್ಗೆ ಅಪ್ಪನೊಡನೆ ಬಸ್ ಸ್ಟ್ಯಾಂಡಿಗೆ ಹೋಗಿದ್ದೆವು. ಆಗಿನಿಂದ ನಾನು ಕೆಲಸಮಾಡುತ್ತಲೇ ಇದ್ದೇನೆ," ಎಂದು ಉತ್ತರಿಸಿದ.

"ಓ, ಹಾಗೇನು ?" ದೊಡ್ಡಪ್ಪ ಅಚ್ಚರಿಯಿಂದ ಕಣ್ಣರಳಿಸಿ ಕೇಳಿದ. "ಹಾಗಾದರೆ ಹಳದಿಕಣ್ಣಿನ ಹುಲಿ ಹಿಡಿದುಕೊಳ್ಳೋಕೆ ಬರುವುದರೊಳಗೆ ಓಡಿ ಮನೆಸೇರಿಕೊ ಅಥವಾ ಇನ್ನೂ ನಿನಗೆ ಹುಲಿ ಎಂದರೆ ಭಯವಿಲ್ಲವೊ ?"– ದನಿ ಕೆಣಕುವಂತ್ತಿತ್ತು.

"ಆ ಹುಲಿ ಅನ್ನೋದೇ ಇಲ್ಲ ಎಂದು ಮಾಸ್ತರು ಮುನಿಸ್ವಾಮಿ ಹೇಳುತ್ತಾರೆ. " ರಾಮನ್ ಹಾಗೆಂದವನು ಮರುಕ್ಷಣವೇ ಹಾಗೆ ಹೇಳಬಾರದಿತ್ತೆಂದುಕೊಂಡ.

"ದೆವ್ವ ಇಲ್ಲವೆಂದು ನಿಮ್ಮ ಮೇಷ್ಟರು ಹೇಳಿದರೆ, ಇಷ್ಟೊಂದು ವರ್ಷಗಳಿಂದ ಹೇಳುತ್ತ ಬಂದಿರುವ ಕಥೆಗಳೆಲ್ಲಾ ಸುಳ್ಳೆ ಏನು?''

"ಅವು ಹೇಗೆ ನಿಜವಿರಲು ಸಾಧ್ಯ?" ರಾಮನ್ ಕೇಳಿದ, "ಯಾವ ಹುಲಿಯು ಅಷ್ಟೊಂದು ವರ್ಷ, ಅದೂ ಒಂದು ಕಣ್ಣಿಟ್ಟುಕೊಂಡು ಬದುಕಲು ಸಾಧ್ಯವೋ? ಒಂದು ವಾರದ ಹಿಂದೆ ತಾನೇ ಮರ್ಕಿನ್ ಜನರು ಕೆಲವರು ಮೂಟೆಗಳನ್ನು ಬೆನ್ನಿಗೇರಿಸಿಕೊಂಡು ಆ ದೊಡ್ಡ ಬೆಟ್ಟದ ತುದಿಯವರೆಗೂ ಹತ್ತಿ ಹೋಗಿ ವಾಪಸು ಬರುತ್ತಿದ್ದುದನ್ನು ಕಂಡೆ" ಬೆಟ್ಟದ ಜನರ ನಿವಾಸಗಳಿಂದ ಉತ್ತರಕ್ಕೆ ಎದ್ದಿದ್ದ "ಆ ದೊಡ್ಡ ಬೆಟ್ಟ" ಒಂದು ಭಾರೀ ಪರ್ವತ, ಗಡ್ಡದ ಬೆಟ್ಟ ಎಂದು ಅದನ್ನು ಕರೆಯುತ್ತಿದ್ದರು. ಅದರ ಮೇಲೆ ಕವಿದಿದ್ದ ಬಿಳಿಯ, ಬೂದು ಬಣ್ಣದ ಮೋಡಗಳಿಂದ ಅದಕ್ಕೆ ಆ ಹೆಸರು ಬಂದಿತ್ತು. ಈ ಬೆಟ್ಟದ ಇಳಿಜಾರುಗಳಲ್ಲಿ ಆ ದೊಡ್ಡ ಹುಲಿ ತನ್ನ ಕಣ್ಣು ಕುರುಡಾಗಿಸಿದ್ದ ಬೇಡನ ಮೇಲೆ ಅಥವಾ ಅವನು ಸಿಕ್ಕದಿದ್ದರೆ ತಾನಿರುವ ಪ್ರದೇಶಕ್ಕೆ ಬರುವ ಧೈರ್ಯ ಮಾಡುವ ಮತ್ತೆ ಯಾವುದೇ ಜನರ ಮೇಲೋ ಪ್ರತೀಕಾರ ತೀರಿಸಿಕೊಳ್ಳಲು ಅಲೆದಾಡುತ್ತಿತ್ತೆಂದು ಕಥೆ ಪ್ರಚಲಿತವಿತ್ತು.

"ಹಾಗಾದರೆ ನಿನ್ನ ಶಾಲೆಯಲ್ಲಿ ಓದಲು ಕಲಿಸುವುದರ ಜತೆಗೆ ವಿಷಯಗಳನ್ನು ಧಿಕ್ಕರಿಸಲೂ ಹೇಳಿಕೊಡುತ್ತಾರೆ ಅನ್ನು" ಎಂದು ದೊಡ್ಡಪ್ಪ ಕೇಳಿದ–

ಆತನ ದನಿಯಲ್ಲಿ ಅವರೆಗಿದ್ದ ಕೀಟಲೆ ಭಾವನೆ ಅಷ್ಟಾಗಿರಲಿಲ್ಲ.

ಕೂಡಲೆ ರಾಮನ್ ಹೇಳಿದ, "ಅದು ಧಿಕ್ಕರಿಸುವುದಲ್ಲ. ಯಾವುದು ನಿಜ ಯಾವುದು ನಿಜವಲ್ಲ ಎಂಬುದನ್ನು ಕಂಡುಹಿಡಿಯುವುದಷ್ಟೆ."

ಆದರೂ ದೂರದ ಇಳಿಜಾರಿನಲ್ಲಿ ಹಳ್ಳಿಯೊಂದರ ಕೊನೆಯಲ್ಲಿ ಒಂದು ಹುಲಿ ಕುರಿಮರಿಯೊಂದನ್ನು ಹೊತ್ತುಕೊಂಡು ಹೋಯಿತೆಂದು ಮೊನ್ನೆ ಐದು ದಿನಗಳ ಹಿಂದೆ ತಾನೇ ಮಾತಿತ್ತು.

"ಹುಲಿಯಿತ್ತು, ನಿಜ, ಆದರೆ 'ಹಳದಿ ಕಣ್ಣು' ಎಂಬುದಿಲ್ಲ. ಬೆಟ್ಟಗಳಲ್ಲಿ ಕೆಲವು ಹುಲಿಗಳು ಇನ್ನೂ ಉಳಿದಿರಬಹುದು. ಅವಕ್ಕೆ ಹಸಿವಾದಾಗ ಊರ ಹೊರಗಿನ ಯಾವುದಾದರೂ ಹೊಲದಿಂದ ಆಹಾರವನ್ನು ಕದಿಯಲು ಬರಬ ಹುದು. ತಾನು ಚಿಕ್ಕವನಿದ್ದಾಗ ಈ ಕಡೆ ಅನೇಕ ಹುಲಿಗಳೂ, ಇತರ ಕಾಡು ಪ್ರಾಣಿಗಳೂ ಇದ್ದವೆಂದು ತಾತ ನಟೇಶನ್ ಹೇಳುತ್ತಾನೆ"

"ಗಡ್ಡದ ಬೆಟ್ಟವಲ್ಲಿ ಹಳದಿ ಕಣ್ಣು ಹುಲಿ ಸೇಡನ್ನರಸುತ್ತ ಇನ್ನೂ ಅಲೆಯುತ್ತಿದೆಯೆಂದು ತಾತ ನಟೇಶನ್ ಹೇಳುತ್ತಾನೆ. ನೀನು ಒಂದನ್ನು ನಂಬುತ್ತೀಯ, ಇನ್ನೊಂದನ್ನು ನಂಬುವುದಿಲ್ಲ ಅಲ್ಲವೆ?''

ಪಟ್ಟು ಬಿಡದೆ ರಾಮನ್ ವಾದಿಸಿದ. ''ಅವೆರಡೂ ಒಂದೇ ಏನಲ್ಲ. ಈ ಬೆಟ್ಟಗಳಲ್ಲಿ ಕೆಲಕಾಲದ ಹಿಂದೆ ಅನೇಕ ಪ್ರಾಣಿಗಳಿದ್ದವೆಂಬುದು ಎಲ್ಲರಿಗೂ ಗೊತ್ತು. ಆದರೆ ಎಷ್ಟೋ ವರ್ಷಗಳ ಹಿಂದೆ ಯಾವನೋ ತನಗೆ ಮಾಡಿದ ತೊಂದರೆಗಾಗಿ ಮುಯ್ಯಿ ತೀರಿಸಲು ಒಂದು ಹುಲಿ ಮನುಷ್ಯರಂತೆ ಹುಡುಕಾ ಡುತ್ತಿದೆಯೆಂದರೆ ಯಾರು ನಂಬುವರು? ಒಂದು ವೇಳೆ ಇದೆಲ್ಲಾ ತಾತ ನಟೇ ಶನ್ ಚಿಕ್ಕ ಹುಡುಗನಾಗಿದ್ದಾಗ ನಡೆದಿದ್ದರೆ 'ಹಳದಿ ಕಣ್ಣು' ಹುಲಿಗೆ ಈಗ ನೂರು ವರ್ಷಗಳಾದರೂ ಆಗಿರಬಬೇಕು. ಯಾವ ಹುಲಿ ಅಷ್ಟು ಕಾಲ ಬದುಕೀತು?"

"ನಿನ್ನ ಮಾಸ್ತರು.ಮುನುಸ್ವಾಮಿ ನಿನಗೆ ಚೆನ್ನಾಗಿಯೇಹೇಳಿಕೊಟ್ಟಿದ್ದಾನೆ" ದೊಡ್ಡಪ್ಪ ಶುಷ್ಕದನಿಯಲ್ಲಿ ಹೇಳಿದ, ''ಇರಲಿ, ಇನ್ನು ಹೊರಡು. 'ಹಳದಿ ಕಣ್ಣು' ಇದೆಯೋ ಇಲ್ಲವೊ? ನೀನಂತೂ ಮನೆಗೋಡು. ಈಗಲೆ ಸಾಕಷ್ಟು ಹೊತ್ತಾಯಿತು."

ದೊಡ್ಡಪ್ಪನಿಗೆ ನಮಸ್ಕಾರ ಹೇಳಿ ರಾಮನ್ ವಾಪಸು ನಡೆದ. 'ಹಳದಿ

ಕಣ್ಣು'! ನೋಡಿನ ಹುಲಿಯ ಕಥೆಯನ್ನು ದೊಡ್ಡಪ್ಪ ಸ್ಥಿರವಾಗಿ ನಂಬುವನೇನು? ನಂಬಿರುವುದಾಗಿ ಆತನೇನೂ ಹೇಳಲಿಲ್ಲ? ಆದರೆ ಈ ಕಥೆ ನಿಜವೆಂಬುದನ್ನು ತಾನು ನಿರಾಕರಿಸಿದ್ದು ಆತನಿಗೆ ಅಷ್ಟಾಗಿ ಹಿಡಿಸಲಿಲ್ಲ.

ತಾತ ನಟೇಶನ್ ಮುದುಕ. ಆತನಿಗೆ ನೂರು ವರ್ಷಗಳಿಗೂ ಹೆಚ್ಚು ವಯಸ್ಸಾಗಿದೆಯೆಂದು ಕೆಲವರು ಹೇಳುತ್ತಿದ್ದರು. ಅದರಿಂದಲೇ ಎಲ್ಲರೂ ಆತ ನನ್ನು "ತಾತ" ಎನ್ನುತ್ತಿದ್ದರು. ಹಗಲು ಹೊತ್ತು ಆತ ತನ್ನ ಸಣ್ಣ ಹಟ್ಟಿ ಯೊಳಗೋ, ಹವಾ ಚೆನ್ನಾಗಿದ್ದರೆ ಅದರ ಹೊರಗಡೆಯೋ ಕೂತಿರುತ್ತಿದ್ದ.ಬೆಟ್ಟದ ಹಾದಿಗಳಲ್ಲಿ ನಡೆದಾಡಲು ಆತನಿಗೆ ತ್ರಾಣವಿರಲಿಲ್ಲ. ಆತ ಏನು ಕೆಲಸ ಮಾಡಲೂ ಆಗುತ್ತಿರಲಿಲ್ಲ. ಆದರೆ ರಾತ್ರಿಯಾಗುತ್ತಿದ್ದಂತೆ ಯಾರಾದರೂ ಬಂದು ಹಟ್ಟಿಯ ಮುಂದೆ ಬೆಂಕಿ ಹೊತ್ತಿಸುತ್ತಿದ್ದರು. ಹುಡುಗರು, ದೊಡ್ಡವರು ಎಲ್ಲರೂ ಬಂದು ಆತ ಹೇಳುವ ಕಥೆಗಳನ್ನು ಕೇಳಲು ಕೂಡುತ್ತಿದ್ದರು. ಬಹು ಮಟ್ಟಿಗೆ ಆತ ಹೇಳುತ್ತಿದ್ದ ಕಥೆಗಳೆಲ್ಲ ಪ್ರಾಣಿಗಳದೇ, ಅಥವಾ ತಾತ ಚಿಕ್ಕವನಿ ದ್ದಾಗ ಬೆಟ್ಟಗಳಲ್ಲಿ ನಡೆದ ಸಂಗತಿಗಳು. ತಾತನ ದೃಷ್ಟಿ ತುಂಬಾ ದಿನ ಗತಕಾಲ ದತ್ತಲೇ ಇದ್ದು ಈಗಿನದನ್ನು ಆತ ಸ್ಪಷ್ಟವಾಗಿ ನೋಡುವುದೇ ಕಷ್ಟವೆಂದು ಕೆಲವರನ್ನುತ್ತಿದ್ದರು. ಆದರೆ ಆತ ಎಲ್ಲೂ ಕೇಳದಿದ್ದಂಥ ಸ್ವಾರಸ್ಯ ಕಥೆಗಳನ್ನು ಹೇಳುತ್ತಿದ್ದ! ಎಷ್ಟೋ ಸಲ ಕೇಳಿದ್ದವರೂ ಅವನ್ನು ಇನ್ನೊಮ್ಮೆ ಕೇಳಲು ಬರುತ್ತಿದ್ದರು,

ರಾಮನ್ ಹಿಂದಕ್ಕೆ ನೋಡಿ ಇಳಿಜಾರಿನ ಮೇಲೆ ಮಿನುಗುತ್ತಿದ್ದ ಬೆಳ ಕನ್ನು ಕಂಡ, ಆ ನಗೆಯಾಟ, ಬೆಂಕಿಯ ಸುತ್ತ ಓಡಾಟ ನಿಂತಿದ್ದವು. ಆ ದೃಶ್ಯ ವನ್ನು ರಾಮನ್ ಊಹಿಸಿಕೊಳ್ಳಬಲ್ಲ. ಮಕ್ಕಳು ಬೆಂಕಿಯ ಬೆಚ್ಚನೆ ಶಾಖಕ್ಕೆ ಸಮೀಪವಾಗಿ ಅದರ ಸುತ್ತಲೂ ಮೌನವಾಗಿ ಕಾಳಿತಿರುತ್ತಾರೆ ದೊಡ್ಡವರು ಬಳಿ ಯಲ್ಲಿ ನಿಂತೋ, ಕುಳಿತೋ ಇರುತ್ತಾರೆ. ತಾತ ನಟೇಶನ್ ತನ್ನ ಹಳೇ ಕಂಬಳಿ ಹೊದೆದು ಮನೆಯ ಬಾಗಿಲ ಮುಂದೆ ಪದ್ಮಾಸನ ಹಾಕಿ ಕುಳಿತಿರುತ್ತಾನೆ. ಗುಳಿ ಬಿದ್ದ ಆತನ ಕೆನ್ನೆಗಳ ಮೇಲಿನ ಗೆರೆಗಳು ಬೆಂಕಿಯ ಬೆಳಕಿನಲ್ಲಿ ಸ್ಪಷ್ಟವಾಗಿ ಕಾಣು ತ್ತಿದ್ದವು. ಆತನ ದನಿ ಎತ್ತರಿಸಿದುದು; ಆಗಾಗ್ಗೆ ಕುಗ್ಗುತ್ತಿತ್ತು. ಆದರೆ ಆ ದನಿ ಜನರನ್ನು ಪರವಶವನ್ನಾಗಿಸುತ್ತಿತ್ತು. ಆ ಧ್ವನಿ ಮತ್ತು ಬೆಂಕಿಯ ಸಪ್ಪಳದ ವಿನಾ ಬೇರೆ ಶಬ್ದ ಕೇಳುತ್ತಿರಲಿಲ್ಲ.

ಕಳೆದ ವರ್ಷದತನಕ ರಾಮನ್ ಕೂಡಾ ಈ ರಾತ್ರಿ ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದ. ತಾತ ಹೇಳುತ್ತಿದ್ದ ಕಥೆಗಳಿಗೆ ಅವನೂ ಮುಗ್ಧನಾಗಿದ್ದ. ಅದರಲ್ಲೂ ಹಳದಿ ಕಣ್ಣಿನ ಹುಲಿ ಮತ್ತು ಬಹುಕಾಲದ ಹಿಂದೆ ತನ್ನನ್ನು ಗಾಯಗೊಳಿಸಿದ ಬೇಟೆಗಾರನಿಗಾಗಿ ಅದರ ಸೇಡಿನ ಶೋಧದ ಕಥೆ ಅವನಿಗೆ ಬಹಳ ಹಿಡಿಸಿತ್ತು. ನಿಜವಾಗಿ ತಾತ ನಟೇಶನ್‌ನ ಮಾಂತ್ರಿಕ ನಿರೂಪಣೆ ಯಿಂದ ಆ ಕಥೆ ಎಷ್ಟು ಸ್ಪಷ್ಟವಾಗಿ ಮನದಲ್ಲಿ ಬೇರೂರಿತ್ತೆಂದರೆ ಆಮೇಲೆ ಮನೆಗೆ ಹಿಂದಿರುಗುತ್ತಿದಾಗ ಹುಡುಗರೆಲ್ಲ ಒಬ್ಬರನೊಬ್ಬರು ತಳ್ಳಾಡುತ್ತ ಕೇಕೆ ಹಾಕುತ್ತ ನಡೆದಿದ್ದರೂ ಅಕ್ಕಪಕ್ಕಗಳಲ್ಲಿ ನೆರಳುಗಳತ್ತ ಆತಂಕದಿಂದ ರಹಸ್ಯವಾಗಿ ನೋಡುತ್ತಿದ್ದರು. ಆ ಕತ್ತಲೆಯಲ್ಲಿ ಹುಲಿಯ ಆಕಾರ ಕಾಣುವು ದೆಂದು ಭಯಮಿಶ್ರಿತ ಶಂಕೆಯಿಂದ ನಿರೀಕ್ಷಿಸುವಂತೆ ನೋಡುತ್ತಿದ್ದರು.

ಆದರೆ ಇದು ನಿಜವಾಗಿ ಕೇವಲ ಕಥೆ, ಇನ್ನೇನೂ ಅಲ್ಲ ಎಂಬುದನ್ನು ರಾಮನ್ ಈಗ ಅರಿತಿದ್ದ. ಸಂಜೆಯಾದ ಮೇಲೆ ಚಿಕ್ಕ ಮಕ್ಕಳು ಹೊರಕ್ಕೆ ಹೋಗದಂತೆ ಹೆದರಿಸಲು ಅದು ಉಪಯುಕ್ತವಾಗಬಹುದಷ್ಟೇ. ಆಮೇಲೆ ತಿಳಿವಳಿಕೆ ಬರತೊಡಗಿದಂತೆ ಬೆಂಕಿಯ ಸುತ್ತ ಕುಳಿತು ಕೇಳುತ್ತಿದ್ದ ಅನೇಕ ಕಥೆಗಳ ಸ್ವಾರಸ್ಯ ಕಳೆದು ಕೊನೆ ಕೊನೆಗೆ ರಾಮನ್ ಏನಾದರೂ ಸಬೂಬು ಹೇಳಿ ಅಲ್ಲಿಗೆ ಹೋಗುವುದನ್ನೇ ತಪ್ಪಿಸಿಕೊಳ್ಳತೊಡಗಿದ. ಒಮ್ಮೊಮ್ಮೆ ತುಂಬಾ ಆಯಾಸವಾಗಿಬಿಡುತ್ತಿತ್ತು, ಅಥವಾ ಮನೆಗೆಲಸ ಹೆಚ್ಚು. ಇಲ್ಲವೋ ಮನೆ ಯಲ್ಲಿ ದೀಪಕ್ಕೆ ಎಣ್ಣೆ ಇದ್ದರೆ ಮನೆಯಲ್ಲಿ ಕುಳಿತೇ ಓದಿಕೊಳ್ಳಲು ಅವನು ಇಚ್ಛಿಸುತ್ತಿದ್ದ. ಅವನ ಮಟ್ಟಿಗೆ ತಾನು ಪುಸ್ತಕಗಳಲ್ಲಿ ಓದಿದ ಕಥೆಗಳೊಡನೆ ಹೋಲಿಸಿದರೆ ತಾತ ನಟೇಶನ್‌ನ ಕಥೆಗಳು ಕೇವಲ ಅಡುಗೂಲಜ್ಜಿ ಕಥೆಗಳಾಗಿ. ನೀರಸವಾಗಿ ಕಾಣುತ್ತಿದ್ದವು.

ದೊಡ್ಡಪ್ಪ ಆ ಹುಲಿಯ ವಿಷಯ ಎತ್ತಿದಾಗ ತಾನು ಅಷ್ಟೊಂದು ಬಾಯಿ ಬಿಡಬಾರದಾಗಿತ್ತೆಂದು ರಾಮನ್‌ಗೆ ಅನ್ನಿಸಿತು. ಅದರಲ್ಲೂ ಎಲ್ಲವನ್ನೂ ಬಿಟ್ಟು ದೊಡ್ಡಪ್ಪನೆದುರಿಗೆ ಈ ಭಯಂಕರ ಹುಲಿಯ ಬಗ್ಗೆ ತನ್ನ ಅಪನಂ ಬಿಕೆ ವ್ಯಕ್ತಪಡಿಸಬಾರದಿತ್ತು. ರಾಮನ್‌ನ ಮಾತುಗಳನ್ನು ಆತ ತಪ್ಪಾಗಿ ಭಾವಿಸಿ ತಾನು ನುಡಿದಿದ್ದ ಭವಿಷ್ಯ ನಿಜವಾಗುತ್ತಿದೆಯೆಂದು ನಿರ್ಧಾರಕ್ಕೆ ಬರುವನೇನೊ. ಹಿಂದಿನ ವರ್ಷ ರಾಮನ್‌ನನ್ನು ಶಾಲೆಗೆ ಕಳಿಸುವುದಾಗಿ ಅವನ ತಂದೆ ಹೇಳಿದಾಗ

ಮೊದಲಲ್ಲಿ ಆಕ್ಷೇಪಿಸಿದ್ದು ದೊಡ್ಡಪ್ಪನೇ.

ಒಂದು ವರ್ಷದ ಹಿಂದಿನ ಆ ಸಂಜೆ ರಾಮನ್‌ಗೆ ಚೆನ್ನಾಗಿ ಜ್ಞಾಪಕದಲ್ಲಿತ್ತು. ತಾನು ಆಗಲೆ ಮಲಗಿದ್ದ. ತಂದೆ ಮನೆಯ ಮುಂದೆ ಕುಳಿತಿದ್ದಾಗ ದೊಡ್ಡಪ್ಪ ರಾಜು ಅಲ್ಲಿಗೆ ಬಂದ. ಮೊದಲು ಮೆತ್ತಗಿದ್ದ ಗಂಡಸರ ಮಾತುಗಳು ಬರಬರುತ್ತ ಗಟ್ಟಿಯಾಗಿ ರಾಮನ್ ಅವನ್ನು ಕೇಳಿಸಿಕೊಂಡ.

"ಮುಂದಿನ ಪರಿಣಾಮವನ್ನು ನೀನು ಊಹಿಸೋಲ್ಲ'' ರಾಮನ್‌ನ ದೊಡ್ಡಪ್ಪ ಹೇಳುತ್ತಿದ್ದ "ಅವನ ತಲೆಯಲ್ಲಿ ತಿಳಿವಳಿಕೆ ತುಂಬಿಕೊಂಡು ಅದರಿಂದ ಅವನಿಗೆ ಈ ಮನೆ ಈ ಹಳ್ಳಿ "ಅವನ ಈ ಸಂಸಾರ ಈ ಜೀವನ ಎಲ್ಲದರ ಬಗ್ಗೆಯೂ ಅತೃಪ್ತಿ ಮೂಡುತ್ತದೆ"

"ಇರಬಹುದು" ತಂದೆ ನಿಧಾನವಾಗಿ ಉತ್ತರಿಸಿದ "ಇದ್ದೀತು.ಪ್ರಾಯಶಃ ಅವನು ಅತೃಪ್ತನಾಗಬೇಕೆಂಬುದೇ ನನಗೂ ಹಿಡಿಸೀತು. ನಾನು ಮರಕಡಿಯುವವನಾದೆನೆಂದು ಅವನೂ ಹಾಗೇ ಆಗಬೇಕೆಂದು ನಾನೇಕೆ ಒತ್ತಾಯ ಮಾಡಬೇಕು ?"

"ಶಾಲೆಗೆ ಹೋಗಲು ನಾನು ವಿರೋಧಿಸುತ್ತಿಲ್ಲ" ತಂದೆಯ ಉತ್ತರ ಕೇಳಿಸಿಯೋ ಇಲ್ಲವೋ ಎಂಬಂತೆ ದೊಡ್ಡಪ್ಪ ಮುಂದುವರಿಸಿದರು "ನಾನು ಕೂಡಾ ಓದಿ ಬರೆಯಲು ಕಲಿತಿದ್ದರೆ ಎಷ್ಟೋ ಚೆನ್ನಾಗಿತ್ತೆಂದು ನಾನೇ ಅನೇಕ ಬಾರಿ ಅಂದುಕೊಂಡಿಲ್ಲವೆ ? ಆದರೆ ರಾಮನ್ ನಮ್ಮ ಹಳ್ಳಿಯಲ್ಲಿ ಶಾಲೆಗೆ ಹೋಗುವ ಏಕೈಕ ಹುಡುಗನಾಗುತ್ತಾನೆಂಬುದನ್ನು ಗಮನದಲ್ಲಿಟ್ಟುಕೊ.ಓದಲು ಅವಕಾಶವಿಲ್ಲದಿದ್ದಂಥ ಇತರರು ಅವನನ್ನು ಧಿಕ್ಕರಿಸಿ ನೋಡುತ್ತಾರೆ. ಅವನು ನಮ್ಮಿಂದ ಪ್ರತ್ಯೇಕವಾಗಿ ಉಳಿಯುತ್ತಾನೆ. ಇದರ ಬದಲು ನಮ್ಮ ಹಳ್ಳಿಯಲ್ಲಿ ಇಲ್ಲೇ ಒಂದು ಶಾಲೆಯಾಗಿ ರಾಮನ್ ಮತ್ತು ಇತರ ಹುಡುಗರು ಒಟ್ಟಿಗೆ ಓದಲು ಆಗುವವರೆಗೆ ಕಾಯುವುದೊಳ್ಳೆಯದು,"

ಅದಕ್ಕೆ ರಾಮನ್‌ನ ತಂದೆ ಹೇಳಿದರು."ನಾನೂ ಕಾದೇ ಇದ್ದೀನಿ. ರಾಮನ್‌ಗೆ ಈಗ ಹನ್ನೆರಡು ವರ್ಷವಾಯಿತಲ್ಲಾ. ಸಾಧ್ಯವಿದ್ದಿದ್ದರೆ ಅನೇಕ ವರ್ಷಗಳ ಹಿಂದೆಯೇ ಅವನನ್ನು ಶಾಲೆಗೆ ಕಳಿಸುತ್ತಿದ್ದೆ. ನಮ್ಮ ಹಳ್ಳಿಯಲ್ಲಿ ಶಾಲೆ ತೆರೆಯುವ ಮಾತು ನಾನೂ, ನೀನೂ ಚಿಕ್ಕವರಿದ್ದಾಗಿನಿಂದ ಇದ್ದೇ ಇದೆ. ಆದರೆ ಅದರಿಂದ ಏನಾಯಿತು ? ಶಾಲೆ ಕಟ್ಟಲು, ಮಾಸ್ತರರಿಗೆ ಸಂಬಳ ಕೊಡಲು

ನಮ್ಮಲ್ಲಿ ಹಣ ಎಲ್ಲಿದೆ ? ನಮ್ಮವರು ಊಟಕ್ಕೆ ಸಾಕಷ್ಟು ಹಣ ಹೊಂದಿದ್ದರೇ ಸಾಕಾಗಿದೆ. ನಾನು ನೀನು ಓದಿ ಬರೆಯಲು ಕಲಿಯಲಿಲ್ಲ, ಆದರೆ ನನ್ನ ಅದೃಷ್ಟ, ಈ ವರ್ಷ ನನಗೆ ಚೆನ್ನಾಗಿದೆ. ಹಗಲು ಹೊತ್ತು ರಾಮನ್ ಮನೆಯಲ್ಲಿಲ್ಲದಿದ್ದರೂ ನಡೆಯುವುದು, ಸಾಧ್ಯವಿರುವಾಗ ಅವನು ಅವಕಾಶ ಉಪಯೋಗಿಸಿಕೊಳ್ಳಲೆಂದು ನನ್ನ ಆಸೆ"

ಹೀಗೆಯೇ ಮಾತು ಮುಂದುವರಿದಿತ್ತು. ಒಳಗಡೆ ರಾಮನ್ ಬಿಗಿದುಕೊಂಡು ಕಂಬಳಿಯೊಳಗೆ ಮುದುಡಿ ಕುಳಿತ; ತಂದೆಯ ಉತ್ತರ ಕೇಳುವ ಆಸೆ ಅವನದು. ಏಕೆಂದರೆ ತಮ್ಮ ಅಣ್ಣನ ಹಿತೋಕ್ತಿ ಕೇಳಬೇಕೆಂಬು ಸಂಪ್ರದಾಯ. ಆದರೂ ರಾಮನ್‌ನ ತಂದೆ ತನ್ನ ನಿಲುವನ್ನೇ ಪ್ರತಿಪಾದಿಸಿದ. ಕೊನೆಗೆ ರಾಜು ದೀರ್ಘವಾಗಿ ಉಸಿರೆಳೆದು ಮೇಲಕ್ಕೆದ್ದ.

"ಹಾಗಾದರೆ, ನೀನು ಮನಸ್ಸು ಮಾಡಿಬಿಟ್ಟಿದ್ದೀಯ ಅನ್ನು. ಆದರೂ ಹುಡುಗನ ಸುಖ ಕುರಿತು ನನಗೇನೊ ಅನುಮಾನವಿದೆ. ಕಲಿಯುವುದೇನೊ ಬಹಳ ಒಳ್ಳೆಯದೇ. ಆದರೆ ಅವನು ಮೊದಲಿಗನಾಗುವುದು ನನಗೆ ಹಿಡಿಸದು ಮೊದಲಿಗನಾಗುವುದು ಯಾವಾಗಲೂ ಸುಲಭವಲ್ಲ"

ಹಾಗೆಂದು ದೊಡ್ಡಪ್ಪ ಎದ್ದುಹೋಗಿದ್ದ. ರಾಮನ್ ಸಮಾಧಾನದ ನಿಟ್ಟುಸಿರುಬಿಟ್ಟ. ಶಾಲೆಗೆ ಹೋಗಬೇಕೆಂಬ ತನ್ನ ಕನಸು ಅದೆಷ್ಟು ಸ್ವಲ್ಪದರಲ್ಲಿ ಕಳೆದು ಹೋಗುವುದರಲ್ಲಿತ್ತು! ತನ್ನ ದೊಡ್ಡಪ್ಪನ ತಿಳಿವಳಿಕೆ ತಪ್ಪಾಗಿತ್ತು. ಓದು ಬರಹ ಕಲಿತ ಮಾತ್ರಕ್ಕೆ ತಾನು ತನ್ನ ಸಂಸಾರ. ತನ್ನ ಹಳ್ಳಿ ಮತ್ತು ತನ್ನ ಚಿರಪರಿಚಿತ ಸಂಬಂಧಗಳೆಲ್ಲದರಿಂದಲೂ ದೂರವಾಗಿಬಿಡುತ್ತಾನೆಯೇ ? ದೊಡ್ಡಪ್ಪನ ಎಣಿಕೆ ತಪ್ಪೆಂದು ತಾನು ಸಾಧಿಸಿ ತೋರಿಸುತ್ತೇನೆ. ''ಹೀಗಾಗುವುದೆಂದು ನಾನು ನಿನಗೆ ಹೇಳಿರಲಿಲ್ಲವೆ ?" ಎಂದು ದೊಡ್ಡಪ್ಪ ಹೇಳಲು ಎಂದೂ ಅವಕಾಶವನ್ನೇ ಕೊಡುವುದಿಲ್ಲ.

ಆದರೆ ಇಂದು ರಾತ್ರಿ ರಾಮನ್ ತನ್ನ ದೊಡ್ಡಪ್ಪನಿಗೆ ಇನ್ನೇನು ಅಂಥ ಅವಕಾಶ ಒದಗಿಸಿಬಿಡುವುದರಲ್ಲಿದ್ದ. ರಾಮನ್ ಈಗ ತಾತ ನಟೇಶನ್‌ನ ಗೋಷ್ಠಿಗೆ ಹೋಗುತ್ತಿಲ್ಲವೆಂಬುದು ಆತನಿಗೆ ತಿಳಿದರೆ ರಾಮನ್ ಕ್ರಮೇಣ ಇತರರಿಂದ ದೂರವಾಗುತ್ತಿದ್ದಾನೆಂಬುದಕ್ಕೆ ಅದೇ ಸಾಕ್ಷ್ಯವೆಂದು ಅರ್ಥಮಾಡುವುದು ಖಂಡಿತ. ರಾಮನ್ ಪುಸ್ತಕಗಳನ್ನೇ ಓದಿದ್ದುದರಿಂದ ಆ ಕಥೆಗಳು ಈಗ

ಅಷ್ಟು ಸ್ವಾರಸ್ಯವಾಗಿ ತೋರುವುದಿಲ್ಲವೆಂದು ಆತ ಅರಿಯಲಾರ. ಒಂದು ರೀತಿಯಲ್ಲಿ "ಹಳದಿ ಕಣ್ಣು" ಹುಲಿ ವಿಷಯ ಪ್ರಸ್ತಾಪಕ್ಕೆ ಬಂದುದು ಒಳ್ಳೆಯದೇ ಅನ್ನಿಸಿತು. ನಟೇಶನ್‌ನ ಗೋಷ್ಠಿಗೆ ಹೋಗದಿರಲು ರಾಮನ್ ಇತ್ತ ಕಾರಣದತ್ತ ದೊಡ್ಡಪ್ಪನ ಗಮನ ಅಷ್ಟಾಗಿ ಹರಿಯದಿರಲು ಅದೇ ಕಾರಣವಾಗಿತ್ತು, ಒಕ್ಕಣ್ಣನ ಹುಲಿಯ ಕಥೆಯನ್ನು ವಿರೋಧಿಸಿ ತಾನೇ ಅಷ್ಟು ಬಲವಾಗಿ ಮಾತಾಡಬಾರದಿತ್ತೆಂದು ರಾಮನ್ ಅಂದುಕೊಂಡ.

ಈ ಹೊತ್ತಿಗೆ ರಾಮನ್‌ಮನೆ ತಲಪಿದ್ದ.ಯಾರೂ ಎದ್ದಿದ್ದಂತೆ ಕಾಣಲಿಲ್ಲ. ಬೆಳಗ್ಗೆ ಬೇಗ ಏಳಬೇಕೆಂದು ಎಲ್ಲರೂ ಮಲಗಿಬಿಟ್ಟಿರಬೇಕು, ಕತ್ತಲಲ್ಲಿ ದಾರಿ ಅರಸುತ್ತ ಅವನು ಒಳಕ್ಕೆ ನಡೆದ.

ಕೋಣೆಯ ಒಂದು ಮೂಲೆ ಅವನದಾಗಿತ್ತು. ಅವನ ಹಾಸಿಗೆಯೆನಿಸಿದ ತಾಳೆಗರಿ ಚಾಪೆಯಿದ್ದುದು ಅಲ್ಲೇ. ಹಗಲುಹೊತ್ತು ಅದನ್ನು ಸುತ್ತಿ ಗೋಡೆಗೊರಗಿಸಿಟ್ಟಿರುತ್ತಿದ್ದರು ; ರಾತ್ರಿ ಅದನ್ನೇ ಹಾಸುತ್ತಿದ್ದರು. ಅವನ ಅಮೌಲ್ಯ ಆಸ್ತಿಯಾಗಿದ್ದ ಆ ಪುಸ್ತಕಗಳನ್ನು ಜೋಡಿಸಿಟ್ಟಿದ್ದುದೂ ಅಲ್ಲೇ. ಎಲ್ಲವೂ ನಿನ್ನೆ ಓದುತ್ತಿದ್ದಂಥ ಒಂದೇ ರೀತಿಯ ಪುಸ್ತಕಗಳು; ಓದಿಓದಿ ಮಾಸಿದ್ದ ಪುಸ್ತಕಗಳು, ಅಲ್ಲದೆ ಪುಸ್ತಕಗಳನ್ನುಕೊಳ್ಳಲೆಂದು ರಾಮನ್ ಕೂಡಿಡುತ್ತಿದ್ದ ಕಾಸುಗಳ ರಹಸ್ಯ ಜಾಗವಾಗಿದ್ದ ಸಣ್ಣ ಗುಣಿಮಾಡಿದ್ದ ಸ್ಥಳವನ್ನು ಮುಚ್ಚಿದ್ದ ಸಡಿಲವಾದ ಇಟ್ಟಿಗೆಯಿದ್ದುದೂ ಇಲ್ಲೇ .ಈ ಗುಟ್ಟಾದ ಜಾಗ ರಾಮನ್‌ನ ವಿನಾ ಮತ್ತಾರಿಗೂ ಗೊತ್ತಿರಲಿಲ್ಲ.ಏಕೆಂದರೆ ಕತ್ತಲಾಗಿ ಯಾರೂ ನೋಡದಿದ್ದಾಗ ಹೊರತು ಬೇರೆ ಯಾವಾಗಲೂ ಅವನು ಅದನ್ನು ತೆರೆಯುತ್ತಿರಲಿಲ್ಲ. ಇಂದೂ ರಾಮನ್ ಅಲ್ಲಿ ಮಂಡಿಯೂರಿ ಕುಳಿತು ಆ ಇಟ್ಟಿಗೆಯನ್ನು ಸರಿಸಿದ,ತನ್ನ ಅಂಗಿಯ ಕೊನೆಯಲ್ಲಿ ಗಂಟು ಹಾಕಿಟ್ಟಿದ್ದ, ಬೆಳಿಗ್ಗೆ ತಂದೆ ಕೊಟ್ಟಿದ್ದ ನಾಣ್ಯವನ್ನು ರಾಮನ್ ಕತ್ತಲಲ್ಲೇ ಹೊರತೆಗೆದ. ಗೋಡೆಯಲ್ಲಿ ಗುಣಿಯಲ್ಲಿಟ್ಟಿದ್ದ ಬಟ್ಟೆಯ ತುಣುಕೊಂದನ್ನು ತೆಗೆದ. ಹುಷಾರಾಗಿ ಆ ನಾಣ್ಯವನ್ನು ಬಟ್ಟೆಯಲ್ಲಿ ಕಟ್ಟಿ ಆ ಗಂಟನ್ನು ಅದರ ಜಾಗದಲ್ಲಿರಿಸಿ ಮತ್ತೆ ಇಟ್ಟಿಗೆಯನ್ನು ಜರುಗಿಸಿ ಅದು ಸರಿಯಾಗಿ ಕುಳಿತಿದೆಯೇ ಎಂದು ಕೈಯಾಡಿಸಿ ನೋಡಿ ಖಾತರಿಮಾಡಿಕೊಂಡ.

ಆಮೇಲೆ ರಾಮನ್ ಕೈಚಾಚಿ ಚಾಪೆ ಸುರುಳಿಯನ್ನು ಎತ್ತಿಕೊಂಡು ನೆಲವಮೇಲಿಟ್ಟು ಒಮ್ಮೆ ಒದ್ದು ಅದನ್ನು ಹರವಿದ. ಕಂಬಳಿಯನ್ನು ಬಿಚ್ಚಿ ಹೊದೆದುಕೊಂಡ. ಮೂಟೆಯಂತೆ ಒಂದು ಕೈಮಡಚಿ ಅದರ ಮೇಲೆ ತಲೆಯಿಟ್ಟು ಮಲಗಿ ನಿದ್ರೆಹೋದ.

## ೭

ನಿಧಾನವಾಗಿ ಮೂರು ವಾರ ಕಳೆಯಿತು. ಇನ್ನೂ ರಾಮನ್‌ನ ತಂದೆಯಿಂದ ಏನೂ ಸುದ್ದಿಯಿಲ್ಲ. ಅಂದರೆ ಆತನಿಗೆ ಇನ್ನೂ ಕೆಲಸ ಸಿಕ್ಕಿರಲಿಲ್ಲವೆಂದಾಯಿತು. ದಿನ ದಿನಕ್ಕೆ ಅಕ್ಕಿ ಖೋತಾ ಆಗತೊಡಗಿತ್ತು. ತರಕಾರಿಯೇನೋ ಬೇಕಾದಷ್ಟಿತ್ತು, ಏಕೆಂದರೆ ಅದು ಮಾರಾಟವಾಗುತ್ತಲೇ ಇರಲಿಲ್ಲ. ಇನ್ನು ಹೆಚ್ಚಿಗೆ ಒಣಗಿಹಾಕಲು ಜಾಗವೇ ಇಲ್ಲವಷ್ಟರಮಟ್ಟಿಗೆ ರಾಮನ್, ವಾಸಂತಿ ಅಣಬೆ ಆಯ್ದು ತಂದಿದ್ದರು....ಹಣ್ಣುಗಳಿಗೂ ಗಿರಾಕಿಯಿರಲಿಲ್ಲ. ದೊಡ್ಡ ಗೋಣಿ ಚೀಲಗಳ ತುಂಬ ಪೈನ್ ಚಿಪ್ಪುಗಳನ್ನು ಆರಿಸಿ ತಂದು ಒಲೆ ಹೊತ್ತಿಸುವುದಕ್ಕೆಂದು ಮಾರುತ್ತಿದ್ದರು. ಆದರೂ ಸಾಕಾಗುತ್ತಿರಲಿಲ್ಲ.

ಇನ್ನೇನಾದರೂ ದಾರಿಯಿರಲೇಬೇಕು ಎಂದು ರಾಮನ್ ಯೋಚಿಸಿದ. ತಂದೆ ಹೊರಟು ಹೋದಾಗಿನಿಂದೀಚೆಗೆ ಮೊದಲ ಬಾರಿಗೆ ಬೆಟ್ಟದ ತುದಿಯ ಹಾದಿಯಿಂದ ಮೇಲಕ್ಕಿದ್ದ ಆ ಮುಂಚಾಚಿದ ಬಂಡೆಯ ಮೇಲೆ ಕುಳಿತಿದ್ದ ಅವನು. ಹಾಗೆಯೇ ಬಯಲುಸೀಮೆಯತ್ತ ದೃಷ್ಟಿ ಹಾಯಿಸಿದ. ಈ ಬಾರಿ ಅವನಿಗೆ ಆನೆ-ರಥಗಳ ಸೇನೆಗಳು ಕಾಣಲಿಲ್ಲ. ವಿಶಾಲವಾದ ಹಚ್ಚನೆಯ ಹೊಲಗದ್ದೆಗಳು, ಇನ್ನೂ ಕೆಳಕ್ಕೆ ಕೆರೆಗಳು, ಆಚೆ ಮಸುಕಾಗಿ ಕಾಣುತ್ತಿದ್ದ ಪಟ್ಟಣ ಕಂಡುಬಂದವು. ಆ ಪಟ್ಟಣಕ್ಕೇ ತಂದೆ ಹೋಗಿದ್ದುದು. ಹಾಗೆಯೇ ದೃಷ್ಟಿಯನ್ನು ಈಚೆಗೆ ಹೊರಳಿಸಿ ಸಮೀಪದಲ್ಲಿ ಕೆಳಗಿದ್ದ ಇಳಿಜಾರುಗಳನ್ನು ನೋಡಿದ. ಲಾಂಟಾನಾ ಬಳ್ಳಿ ದಟ್ಟವಾಗಿ ಬೆಳೆದಿತ್ತು; ಹಳದಿ. ಕೇಸರಿ ಬಣ್ಣಗಳ ಹೂಗಳು ಹಕ್ಕಿಗಳಿಗೆ ಪ್ರಿಯವಾದ ಕಪ್ಪನೆಯ ಹಣ್ಣುಗಳು ಬಿಟ್ಟಿದ್ದವು. ಒಂದು ಜತೆ ಬುಲ್‌ಬುಲ್ ಹಕ್ಕಿಗಳು ಪೊದೆಯಿಂದ ಪೊದೆಗೆ ಹಾರುತ್ತ ಈ ಕಪ್ಪು ಹಣ್ಣುಗಳನ್ನು ತಿನ್ನುತ್ತಿದ್ದುದು ಅವನು ಕುಳಿತಲ್ಲಿಂದಲೇ ಕಾಣಿಸಿತು. ಉದ್ದನೆಯ ಮೂಗಿನ ಮೃದುವಾದ ಬೂದು ಬಿಳಿ ಬಣ್ಣದ ಹಕ್ಕಿಗಳೂ; ಚಿಲಿಪಿಲಿಗುಟ್ಟುತ್ತ ಓಡಾಡುತ್ತಿದ್ದವು.

ಲಾಂಟಾನಾಗಳ ನಡುವೆ, ಗುಡ್ಡದ ಮೇಲೆ ಮರ್ಕಿನ್ ಮಂದಿಯ ತೋಟದಲ್ಲಿದ್ದಂಥ ಬೇರೆ ಹಲವು ಹೂಗಳೂ ಅಲ್ಲಲ್ಲಿ ಬೆಳೆದಿದ್ದವು, ಮನದಲ್ಲೇ ರಾಮನ್ ಅವನ್ನು ಹೆಸರಿಸಿದ. ಲಾರ್ಕ್‌ಸ್ಪರ್,ಫಾಕ್ಸ್‌ಗ್ಲೋವ್ ಸ್ನ್ಯಾಪ್ ಡ್ರೇಗನ್, ಪರ್ಪಲ್ ಸೇಜ್....ವಿಚಿತ್ರವಾದ ಇಂಗ್ಲಿಷ್ ಹೆಸರುಗಳು, ಕುಂಟನಾಗುವ ಮುಂಚೆ ಮರ್ಕಿನ್ ಮಂದಿಯ ಮನೆಯೊಂದರಲ್ಲಿ ತೋಟಗಾರನಾಗಿ ಕೆಲಸ ಮಾಡುತ್ತಿದ್ದ ದೊಡ್ಡಪ್ಪ ರಾಜುವಿನಿಂದ ರಾಮನ್ ಈ ಹೆಸರುಗಳನ್ನು ತಿಳಿದಿದ್ದ, ತಾನು ಚಿಕ್ಕವನಿದ್ದಾಗ ರಾಮನ್ ಕೆಲವು ಬಾರಿ ಹೂಗಿಡಗಳ ಪಾತಿ ಸರಿಮಾಡುವುದು, ಸಸಿಗಳನ್ನು ನೆಡುವುದು. ಬಾಗಿದ ಕಾಂಡಗಳನ್ನು ನೆಟ್ಟಗೆ ಕಟ್ಟುವುದು, ಬಂಗಲೆಯಲ್ಲಿನ ಹೂವಿನ ಕುಂಡಗಳಲ್ಲಿಡಲು ಹೂಗಳನ್ನು ಕೊಯ್ಯುವುದೇ ಮೊದಲಾದ ಕೆಲಸಗಳಲ್ಲಿ ದೊಡ್ಡಪ್ಪನಿಗೆ ನೆರವಾಗುತ್ತಿದ್ದ.

ಹಠಾತ್ತನೆ ರಾಮನ್ ನೆಟ್ಟಗೆದ್ದು ಕುಳಿತ. ಮೊದಲಲ್ಲಿ ಅಸ್ಪಷ್ಟವಾದರೂ ಒಂದು ಯೋಚನೆ ಹೊಳೆದಿತ್ತು, ಹೂಗಳು. ಅವುಗಳಿಂದ ತಾನೇನಾದರೂ ಮಾಡಲು ಸಾಧ್ಯವೆ ? ಅವನ್ನು ಮಾರಬಹುದೇ ? ಬಹುತೇಕ ಬಂಗಲೆಗಳಲ್ಲಿ ತೋಟಗಳಿದ್ದವು, ನಿಜ. ಆದರೆ ಹೂಗಳು ಅರಳದೆ ಇದ್ದ ಮನೆಗಳಿರಬಹುದು. ಅಥವಾ ಒಪ್ಪವಾಗಿ ಕೊಯ್ದು ಜೋಡಿಸಿಕೊಟ್ಟ ಹೂಗಳನ್ನು ಕೊಳ್ಳುವವರು ಯಾರಾದರೂ ಇರಬಹುದು.

ಒಮ್ಮೆ ಪ್ರಯತ್ನ ಮಾಡಿ ನೋಡುವುದು. ಅವಸರದಿಂದ ರಸ್ತೆಗೆ ಇಳಿದು ಆಚೆಯ ಇಳಿಜಾರಿನಲ್ಲಿ ನಿಧಾನವಾಗಿ ಕೆಳಕ್ಕಿಳಿದ. ತನ್ನ ದೊಡ್ಡಪ್ಪ ಮಾಡುತ್ತಿದ್ದಂತೆ ಉದ್ದವಾದ ಕಾಂಡಗಳೊಂದಿಗೆ ಹೂಗಳನ್ನು ಕೀಳಲಾರಂಭಿಸಿದ. ತನ್ನ ಕೈಯಲ್ಲಿ ಒಯ್ಯಲು ಸಾಧ್ಯವಾಗುವಷ್ಟು ಹೂಗೊಂಚಲುಗಳನ್ನು ಕಿತ್ತು ಮತ್ತೆ ಇಳಿಜಾರನ್ನೇರಿ ರಸ್ತೆಗೆ ಬಂದ. ತಲೆಯೆತ್ತಿ ಬೆಟ್ಟದ ಮೇಲಿದ್ದ ಬಿಳಿಯ ಬಂಗಲೆಗಳತ್ತ ನೋಡಿ ಮೊದಲು ಅಲ್ಲಿ ಪ್ರಯತ್ನಿಸಬೇಕೆಂದುಕೊಂಡ,

ಆ ದಾರಿಯಲ್ಲೇ ನಡೆದು ಅವನು ಒಂದು ಕಬ್ಬಿಣದ ಬಾಗಿಲನ್ನು ಸಮೀಪಿಸಿದ. ಅದರಾಚೆ ಕೆಲವು ಕಲ್ಲು ಮೆಟ್ಟಿಲುಗಳು. ಅವನ್ನು ಹತ್ತಿ ನಡೆದರೆ ಬಂಗಲೆ. ಗೇಟಿನ ಅಗುಣಿ ತೆಗೆದು ಬಾಗಿಲನ್ನು ಸ್ವಲ್ಪ ಸರಿಸಿ ಒಳಕ್ಕೆ ಪ್ರವೇಶಿಸಿದ. ಓ, ಕಾಲುಗಳಡಿ ಎಷ್ಟು ತಣ್ಣಗಿದೆ! ಅವನು ಮೆಟ್ಟಿಲುಗಳನ್ನು ಹತ್ತುತ್ತಿದ್ದಂತೆ

ಅವನ ಬರಿಗಾಲುಗಳು ಗಾಳಿಯಿಂದ ಥಣ್ಣನೆ ಕೊರೆಯುತ್ತಿದ್ದವು. ಕೆಲವೆಡೆ ಕಲ್ಲು ತೇವವಾಗಿದ್ದು ಪಾಚಿ ಕಟ್ಟಿದಲ್ಲಿ ಕಾಲು ಜಾರುತ್ತಿತ್ತು,

ಮೇಲಕ್ಕೆ ನಡೆದು ಬಂಗಲೆಯ ಮುಂದೆ ನಿಂತಾಗ ಅಲ್ಲಿ ಯಾರೊ ಇದ್ದಂತೆ ಕಾಣಲಿಲ್ಲ, ಕಿಟಕಿಗಳೆಲ್ಲಾ ಮುಚ್ಚಿ ಬಾಗಿಲುಗಳಿಗೆ ಬೀಗ ಹಾಕಿದ್ದರು. ಪಕ್ಕದ ಬಂಗಲೆ ಆದರಾಚೆಯ ಬಂಗಲೆ ಕೂಡಾ ಅಷ್ಟೆ. ಹಾಗೆಯೇ ಮುಂದಕ್ಕೆ ನಡೆದ. ಕೈಲಿ ಹಿಡಿದಿದ್ದ ಹೂಗಳು ಮುಷ್ಟಿಯ ಬಿಗಿತದಿಂದ ಸೊರಗಲಾರಂಭಿಸಿದ್ದವು, ಇಲ್ಲ, ಇದರಿಂದ ಪ್ರಯೋಜನವಿಲ್ಲ. ಈ ವಿಷಯ ಮೊದಲೇ ಗೊತ್ತಿದ್ದಿದ್ದರೆ !

ಅರೆ, ಅದೋ! ಬೆಟ್ಟದ ಮೇಲೆ ರಸ್ತೆಯ ಕೊನೆಯಲ್ಲಿ ಬೆಟ್ಟದ ಜನ ತಾಂಡ್ಯಗಳತ್ತ ತಿರುಗುವಲ್ಲಿ ಒಂದು ಮನೆಯ ಚಿಮಣಿಯಿಂದ ಹೊಗೆ ಬರುತ್ತಿತ್ತು. ಅಲ್ಲಿ ಇನ್ನೂ ಯಾರೋ ಇದ್ದರು. ರಾಮನ್ ಓಡಲಾರಂಭಿಸಿದ. ದೇವರೇ, ಅವರು ಹೂ ಬೇಕೆನ್ನಲಿ ಎಂದು ಜಪಮಾಡತೊಡಗಿದ,

ಹೊಗೆಯೇಳುತ್ತಿದ್ದುದು ಮುಖ್ಯ ಬಂಗಲೆಯಿಂದಲ್ಲ, ಅದರ ಹಿಂದಿದ್ದ ಅಡಿಗೆ ಮನೆಯಿಂದ. ಅಡಿಗೆ ಮನೆ ಬಾಗಿಲ ಮೂಲಕ ಇಣಕಿ ನೋಡಿದಾಗ ಒಳಗೆ ಬಿಳಿಯ ಪಾಗು ಸುತ್ತಿದ್ದ ಅಡಿಗೆಯವನು ಕಬ್ಬಿಣದ ಷ್ಟೋವ್ ಮೇಲಿನ ಪಾತ್ರೆಯೊಂದರಲ್ಲಿ ಏನನ್ನೋ ಕಲಕುತ್ತಿದ್ದುದು ಕಾಣಿಸಿತು. ಪೇಟೆಯಲ್ಲಿ ಅನೇಕ ಸಲ ನೋಡಿದುದರಿಂದ ರಾಮನ್‌ಗೆ ಅತನ ಹೆಸರು ಗೊತ್ತಿತ್ತು, ಪೆರಿಯ (ದೊಡ್ಡ) ಸುಂದರಂ ಎಂದು ಜನ ಆತನನ್ನು ಕರೆಯುತ್ತಿದ್ದರು. ಪ್ರತಿ ವರ್ಷ ಬಯಲು ಸೀಮೆಯಿಂದ ಅವನು ತಾನು ನೌಕರಿಯಲ್ಲಿದ್ದ ಮರ್ಕಿನ್ ಮಹಿಳೆಯೊಡನೆ ಬೆಟ್ಟಕ್ಕೆ ಬರುತ್ತಿದ್ದ. ಎತ್ತರವಾಗಿ ದಷ್ಟಪುಷ್ಟನಾಗಿ ಇದ್ದ ಆತ ಎಷ್ಟೋ ವರ್ಷ ಅಡಿಗೆ ಬೇಯುತ್ತಿದ್ದ ಪಾತ್ರೆಗಳೊಳಗೆ ಬಗ್ಗಿ ನೋಡಿ ನೋಡಿ ಬಾಗಿದ ಭುಜದವನಾಗಿದ್ದ.

ಬಾಗಿಲಲ್ಲಿ ರಾಮನ್‌ನ ನೆರಳು ಕಂಡಾಗ ಪೆರಿಯಸುಂದರಂ ಕತ್ತೆತ್ತಿ ನೋಡಿದ,

"ಏನೋ ಹುಡುಗ?" ಅವನು ತಮಿಳಿನಲ್ಲಿ ಕೇಳಿದನಾದರೂ ಅದು ಬೆಟ್ಟಗಳ ತಮಿಳಲ್ಲ.

"ಅಮ್ಮ ಹೂಗಳನ್ನು ಕೊಳ್ಳುವರೇ ಎಂದು ಕೇಳಲು ಬಂದೆ" ಕೈಲಿದ್ದ

ಗೊಂಚಲನ್ನು ತೋರಿಸುತ್ತ ರಾಮನ್ ಹೇಳಿದ.

"ಅಮ್ಮ ಮುಂದುಗಡೆ ವರಾಂಡದಲ್ಲಿದ್ದಾರೆ" ಎಂದು ಸುಂದರಂ ಇನ್ನೊಂದು ಒಲೆಯ ಮೇಲಿದ್ದ ತಪ್ಪಲೆಯೊಂದರಲ್ಲಿ ಒಂದು ಬೆತ್ತದಿಂದ ಕಲಕಲಾರಂಭಿಸಿದ."ಆದರೆ ಅಮ್ಮ ಹೂಗಳನ್ನು ಕೊಳ್ಳಲಾರರೆಂದು ನನಗನಿಸುವುದು" ಹೊರಗಡೆಗೆ ಬೆತ್ತದಿಂದ ಕೈ ತೋರುತ್ತ ಆತ ಹೇಳಿದ: "ನೋಡು ಹುಡುಗ! ಇಂಥ ತೋಟಕ್ಕೆ ಸಮನಾದ ತೋಟವಾವುದನ್ನಾದರೂ ನೋಡಿದ್ದೀಯಾ?"

ರಾಮನ್ ಮನೆಯತ್ತ ನೋಡಿದ. ಲಾರ್ಕ್‌ಸ್ಪರ್ ಅವನಿಗಿಂತ ಎತ್ತರ ಬೆಳೆದಿತ್ತು. ಎಳೆಗೆಂಪು ಮತ್ತು ನೀಲಿ ಲಿಲಿಗಳು ಹಾದಿಯ ಪಕ್ಕದಲ್ಲಿ ದಟ್ಟವಾಗಿ ಬೆಳೆದಿದ್ದವು! ಅಂಗಳದಲ್ಲೆಲ್ಲ ತೆಳುವಾದ ರೆಂಬೆಯ ಗಸಗಸೆ ಗಿಡಗಳು ಅಚ್ಚ ಬಣ್ಣದ್ದಾಗಿ ಹರಡಿದ್ದವು. ಅವನಿಗೆ ಹೆಸರುಗಳೇ ತಿಳಿಯದ ಇನ್ನು ಎಷ್ಟೋ ಹೂಗಳಿದ್ದವು. ಅವುಗಳೊಡನೆ ಹೋಲಿಸಿ ನೋಡಿದಾಗ ಅವನ ಕೈಲಿದ್ದ ಹೂಗಳು ಬಾಡಿ ಬಾಗಿದ್ದವು. ಅವನ್ನು ಹಿಡಿದಿದ್ದ ಕೈ ಕೆಳಕ್ಕೆ ಕುಸಿದು ಹೂಗಳು ನೆಲ ತಾಗಿದವು. ವಾಪಸು ಹೊರಟ.

"ಆದರೆ ಇರು." ಸುಂದರಂ ಸಹಾನುಭೂತಿಯಿಂದ ಹೇಳಿದ,"ಬೇಕಾದರೆ ಅಮ್ಮನನ್ನು ಕೇಳು, ನನ್ನ ಜತೆ ಬಾ" ಒಲೆಗೆ ಇನ್ನೆರಡು ಸೌದೆ ತುರುಕಿ ಭುಜದಮೇಲೆ ಹಾಕಿಕೊಂಡಿದ್ದ ಟವಲಿನಿಂದ ಕೈ ಒರಸಿಕೊಂಡು ಹೊರಕ್ಕೆ ಬಂದ; ಮಂದ ಬೆಳಕಿನ ಕಿಟಕಿಯಿಲ್ಲದ ಅಡಿಗೆಮನೆಯಿಂದ ಹೊರಕ್ಕೆ ಬಂದಾಗ ಬಿಸಿಲು ಕಣ್ಣಿಗೆ ತಾಗಿತು. ಅಂಗಳದ ನಡುವೆ ರಾಮನ್ ಅವನ ಹಿಂದೆ ನಡೆದು ಇಬ್ಬರೂ ಮನೆಯ ಇನ್ನೊಂದು ಪಕ್ಕಕ್ಕೆ ಬಂದರು.

ಮರ್ಕಿನಮ್ಮ ವರಾಂಡದಲ್ಲಿ ಎದುರುಗಡೆಗೆ ಮುಖಮಾಡಿ ಕುಳಿತಿದ್ದಳು. ಆಕೆ ಕುಳಿತಿದ್ದ ದೊಡ್ಡ ಕುರ್ಚಿಯ ಮೇಲೆ ಹಿಂದಿನಿಂದ ಆಕೆಯ ನರೆತ ಕೂದಲು ಮಾತ್ರ ಕಾಣುತ್ತಿತ್ತು. ರಾಮನ್ ಕುರ್ಚಿಯನ್ನೇ ದಿಟ್ಟಿಸಿ ನೋಡಿದ; ಕಾಲುಗಳ ಬದಲು ಅದಕ್ಕೆ ದೊಡ್ಡ ಚಕ್ರಗಳಿದ್ದವು.

"ಅಮ್ಮಾ ಈ ಹುಡುಗ ಹೂಮಾರಲು ಬಂದಿದ್ದಾನೆ." ಪೆರಿಯಸುಂದರಂ ತಮಿಳಿನಲ್ಲಿ ಹೇಳಿದ. ದನಿ ಕೇಳಿದೊಡನೆ ಕುರ್ಚಿಯನ್ನು ಹಿಂದಕ್ಕೆ ತಿರುಗಿಸಿದಳು. ಆಕೆಯ ಒಂದು ಕಾಲಿಗೆ ಬಿಳಿಯ ಪ್ಲಾಸ್ಟರ್ ಕಟ್ಟಿದುದನ್ನು ಆಗ ರಾಮನ್ ನೋಡಿದ. ತನ್ನ ದೊಡ್ಡಪ್ಪ ಮೊದಲು ಗಾಯವಾಗಿದ್ದಾಗ ಕಾಲಿಗೆ



ಇಂಥದೇ ಪಟ್ಟಿ ಕಟ್ಟಿದ್ದುದನ್ನು ಜ್ಞಾಪಿಸಿಕೊಂಡ. ಮರುಕ್ಷಣವೇ ನೋಟವನ್ನು ಕೆಳಗೆ ಮಾಡಿದ. ದಿಟ್ಟಿಸಿ ನೋಡುತ್ತಿದ್ದನೆಂದು ಮರ್ಕಿನ್ ಮಹಿಳೆ ಅಂದುಕೊಳ್ಳಬಹದೆಂಬ ಯೋಚನೆ ಹೊಳೆದು ನಾಚಿಕೆಯಾಯಿತು. ಆಕೆ ತನ್ನ ತಲೆ ಅಲ್ಲಾಡಿಸುತ್ತಿದ್ದಂತೆ ನಕ್ಕುದನ್ನು ಅವನು ನೋಡಲಿಲ್ಲ.

"ನನಗೆ ಹೂಗಳು ಬೇಡ; ತೋಟದಲ್ಲಿ ಬೇಕಾದಷ್ಟಿವೆ." ಆ ಕೆ ಯೂ ತಮಿಳಿನಲ್ಲೇ ಹೇಳಿದಳು. ಆದರೆ ನಿಧಾನವಾಗಿ ಆಡಿದ ಮಾತುಗಳು ರಾಮನ್ ಕಿವಿಗೆ ವಿಚಿತ್ರವೆನಿಸಿದವು.

ಕಣ್ಣುಗಳು ಕೆಳಗಡೆ ನೋಡುತ್ತಿದ್ದಂತೆಯೇ ರಾಮನ್ ಹೂಗುಟ್ಟಿದ. ಪೆರಿಯಸುಂದರಂ ಹೇಳಿದಂತೆಯೇ ಆಗಿತ್ತು. ತನ್ನ ಕಾಂಪೌಂಡಿನಲ್ಲೇ ಅಷ್ಟೊಂದಿರುವಾಗ ಮರ್ಕಿ ನಮ್ಮ ಈ ಬಾಡಿದ ಹೂಗಳನ್ನೇಕೆ ಕೊಳ್ಳುತ್ತಾಳೆ ?

ಮುಖದಲ್ಲಿ ಮೂಡಿದ್ದ ನಿರಾಸೆಯನ್ನು ಮುಚ್ಚಿಡಲು ಪ್ರಯತ್ನಪಡುತ್ತ ಅವನು ಹಿಂದಿರುಗಲಿದ್ದಾಗ ಮರ್ಕಿನ್ ಮಹಿಳೆ ಮತ್ತೆ ಮಾತಾಡಿದಳು. "ಸ್ವಲ್ಪ ಇರು ನನ್ನದೊಂದು ಯೋಚನೆಯಿದೆ." ಚಕಿತನಾಗಿ ರಾಮನ್ ತಿರುಗಿನೋಡಿದ. "ನನಗೆ ಕೆಲವು ಹೂಗಳು ಬೇಕು. ಆದರೆ ಅವು ತೋಟದ ಹೂಗಳಲ್ಲ. ಬೆಟ್ಟದ ಹೂಗಳಾಗಬೇಕು" ಆಕೆ ಮಾತು ನಿಲ್ಲಿಸಿದಳು; ರಾಮನ್ ಧೈರ್ಯಮಾಡಿ ಆಕೆ

ಯತ್ತ ನೋಡಿದ. ಹೊಳೆಯುವ ನೀಲಿ ಕಣ್ಣುಗಳು ಆಸಕ್ತಿಯಿಂದ ತನ್ನ ಮುಖ ವನ್ನು ಪರೀಕ್ಷಿಸಿ ನೋಡುತ್ತಿದ್ದುದು ಕಾಣಿಸಿತು. ಆದರೆ ಅವುಗಳಲ್ಲಿ ಕರುಣೆ ಯಿತ್ತು. "ಯಾವ ಹೂಗಳೆಂಬುದನ್ನು ಬಲ್ಲೆಯಾ ?"

ರಾಮನ್ ಯೋಚಿಸಿದ. ಬೆಟ್ಟದ ಹೂಗಳೇ ? ಕೆರೆಯಾಚೆ ಪೊದೆಗಳಲ್ಲಿ ಅಲ್ಲಲ್ಲಿ ಕಾಡುಹೂಗಳು ಬೆಳೆದಿರುತ್ತವೆ. ಆದರೆ ಅವನ್ನು ಕುಂಡಗಳಲ್ಲಿ ಇಡಲು ಬರುವಂತಿಲ್ಲ. ಮರ್ಕಿನ್ ಮಹಿಳೆ ಕೇಳುವುದು ಅದನ್ನಲ್ಲ.

"ನನಗೆ ಖಚಿತವಾಗಿ ಗೊತ್ತಿಲ್ಲ. ಅವನ್ನು ನಾನು ಗಮನಿಸಿಲ್ಲ" ಕೊನೆಗೆ ಅವನು ಉತ್ತರವಿತ್ತ.

"ಹಾಗಾದರೆ ಅವನ್ನು ಹುಡುಕು; ಸಿಕ್ಕರೆ ನನಗೆ ತಂದುಕೊಡು"

"ಆಗಲಿ ಅಮ್ಮಾ ನೋಡುತ್ತೇನೆ" ಎಂದು ರಾಮನ್ ತಲೆ ಅಲ್ಲಾಡಿಸಿದ. ವಯಸ್ಸಾದ ಮಹಿಳೆಯರೆಲ್ಲರನ್ನು ಗೌರವದಿಂದ "ಅಮ್ಮಾ" ಎನ್ನಲಾಗುತ್ತಿತ್ತು.

ರಾಮನ್ ಆಕೆಗೆ ವಂದಿಸಿ ಹೊರಕ್ಕೆ ನಡೆದ ಹೋಗುತ್ತ ಕೈಲಿದ್ದ ಬಾಡಿದ ಹೂಗಳನ್ನು ಗೇಟಿನ ಹೊರಕ್ಕೆ ಕಾಲಿಡುತ್ತಲೇ ಪಕ್ಕಕ್ಕೆ ಎಸೆದುಬಿಟ್ಟ. ಆಗಲೆ ಸಂಜೆಯಾಗಿತ್ತು; ಇಂದು ಇನ್ನು ಕಾಡುಹೂಗಳನ್ನು ಅರಸುವುದು ಕಷ್ಟ. ನಾಳೆ ಪೈನ್‌ತೋಪಿನಲ್ಲಿ ಹುಡುಕುವುದು. ಅಲ್ಲಿ ನೆರಳಿತ್ತು; ಹೂಗಳು ಬೆಳೆ ಯಲು ಒಳ್ಳೇ ಜಾಗ. ಈ ಹಿಂದೆ ಅಲ್ಲಿ ಹೂಗಳನ್ನು ಅವನು ಕಂಡಿರಲಿಲ್ಲ; ಆದರೆ ಅವನ್ನು ಹುಡುಕಲು ಹೋಗಿರಲಿಲ್ಲವಲ್ಲ,ನಾಳೆ ಚೆನ್ನಾಗಿ ಹುಡುಕುವುದು. ವಾಸಂತಿ ಪೈನ್‌ಶಂಕುಗಳನ್ನು, ಅಣಬೆಯನ್ನು ಆರಿಸಲಿ; ತಾನು ಮಾತ್ರ ಕಾಡು ಹೂಗಳನ್ನು ಆರಿಸಿ ಮರ್ಕಿನ್ ಮಹಿಳೆಗೆ ಕೊಡಬೇಕು. ಪ್ರಾಯಶಃ ತಾನೇ ಹೆಚ್ಚು ಸಂಪಾದಿಸಬಹುದೇನೊ ಯಾರಿಗೆ ಗೊತ್ತು ?

ತನ್ನ ಮನೆಯಿದ್ದ ಕಣಿವೆಗೆ ಸಮೀಪವಾಗುವ ಕಾಲುದಾರಿಯೊಂದಕ್ಕೆ ಅವನು ತಿರುಗಿದ. ಪೂರ್ತಾ ಯೋಚನೆಯಲ್ಲಿ ಮಗ್ನನಾಗಿದ್ದವನು ಎದುರಿಗೆ ಯಾರೋ ಬರುತ್ತಿದ್ದುದನ್ನು ಗಮನಿಸಲಿಲ್ಲ. ಬರುತ್ತಿದ್ದವನು ನಿಂತನು. ರಾಮನ್ ನಿಲ್ಲದೆ ಹಾಗೆಯೇ ಮುಂದುವರಿದು ರಸ್ತೆಯ ಮಧ್ಯೆ ಜೇಬಿನಲ್ಲಿ ಕೈಹಾಕಿಕೊಂಡು ನಿಂತಿದ್ದ ಹುಡುಗನಿಗೆ ಡಿಕ್ಕಿಹೊಡೆದ.

ಆಶ್ಚರ್ಯಗೊಂಡು ರಾಮನ್ ತಲೆಯೆತ್ತಿ ನೋಡಿದ. ಬಂದವನು ಕಳೆದ ವರ್ಷದವರೆಗೂ ರಾಮನ್‌ನ ಅತ್ಯಂತ ನಿಕಟ ಸ್ನೇಹಿತನಾಗಿದ್ದ ಜೇಸುದಾಸನ್.

ಮುಖ ಗಂಟಿಕ್ಕಿ ಇಬ್ಬರೂ ಪರಸ್ಪರ ನೋಡಿದರು.

"ಈಗ ನೀನು ನಿಜವಾಗಿ ಪಂಡಿತನಾಗಿಬಿಟ್ಟಿದ್ದೀ" ಜೇಸುದಾಸ್ ಅಣಕಿಸುವ ದನಿಯಲ್ಲಿ ಹೇಳಿದ "ಎಲ್ಲಿ ಹೋಗುತ್ತಿರುವನೆಂಬುವನ್ನು ನೋಡದಷ್ಟು ಅನ್ಯಮನಸ್ಕನಾಗಿರುವುದು ನಿಜವಾದ ಪಂಡಿತನ ಲಕ್ಷಣವಲ್ಲವೆ ?"

"ನಾನು ಏನೋ ಯೋಜನೆ ಮಾಡುತ್ತಿದ್ದೆ." ಆ ಹುಡುಗನನ್ನು ಹಾದು ಹೋಗಲು ಪಕ್ಕಕ್ಕೆ ಅಡಿಯಿಟ್ಟು ರಾಮನ್ ಗಂಭೀರವಾಗಿ ಹೇಳಿದ.

ಆದರೆ ಜೇಸುದಾಸನ್ ಕೂಡಾ ಒಂದು ಹೆಜ್ಜೆ ಪಕ್ಕಕಿಟ್ಟು ರಾಮನ್‌ನನ್ನು ಅಡ್ಡಗಟ್ಟಿದ. ಅವನಿಗೂ ರಾಮನ್‌ನಷ್ಟೇ ವಯಸ್ಸಾಗಿದ್ದರೂ ಅವನು ಇನ್ನೂ ಎತ್ತರವಾಗಿ ದಪ್ಪಗೆ ಬೆಳೆದಿದ್ದ

"ಈಚೆಗೆ ನಾವು ಸೇರುವುದೇ ಅಪರೂಪವಾಗಿಬಿಟ್ಟದೆ. ಈನಡುವೆ ನೀನು ಶಾತ ನಟೇಶನ್‌ನ ಬೆಂಕಿ ಕಾಯಿಸಿಕೊಳ್ಳುವ ಗೋಷ್ಠಿಗೂ ಬರುತ್ತಿಲ್ಲ" ಎಂದ ಜೇಸುದಾಸನ್.

ರಾಮನ್ ಏನೂ ಹೇಳಲಿಲ್ಲ.

"ಈಗ ನೀನು ಓದುವುದರಿಂದ ಅಲ್ಲಿಗೆ ಹೋಗುವುದು ನಿನ್ನ ಘನತೆಗೆ ಕಡಿಮೆ ಅಲ್ಲವೆ ?"

"ಇಲ್ಲ. ಇಲ್ಲ. ಹಾಗಲ್ಲ." ಕೋಪದಿಂದ ರಾಮನ್‌ನ ಗಂಟಲು ಕಟ್ಟಿದಂತಾಯಿತು. "ನನಗೆ ಬಹಳ ಕೆಲಸವಿದೆ ಅಷ್ಟೆ"

"ಬಹಳ ಕೆಲಸ !" ಜೇಸುದಾಸನ್ ಅಣಕಿಸಿದ "ಬಹಳ ಕೆಲಸ! ಶಾಲೆಗೆ ಹೋಗುವುದಕ್ಕೆ ಮೊದಲು ನಿನಗೆ ಬಹಳ ಕೆಲಸವಿರಲಿಲ್ಲ. ಈಗ ಬಹಳ ಕೆಲಸವಿದೆಯೆಂದು ನಮಗೆ ಹೇಳುತ್ತೀಯೆ. ನೀನು ಓದಬಲ್ಲೆ; ನಮಗೆ ಬರದು. ನೀನು ವಿದ್ಯಾರ್ಥಿ: ನಾವು ಬರಿಹೊಲದ ಮಕ್ಕಳು ಅಲ್ಲವೆ?" ಜೇಸುದಾಸನ್‌ನ ದನಿ ಈಗ ಗಡುಸಾಗಿತ್ತು.

"ನನಗೆ ಪುರುಸೊತ್ತಿಲ್ಲ ಅಷ್ಟೇ" ರಾಮನ್ ಪಟ್ಟುಬಿಡದೆ ಹೇಳಿದ.

ಜೇಸುದಾಸನ್‌ನ ಹಿಂದೆ ರಸ್ತೆಯಲ್ಲಿ ಯಾರೋ ಬರುತ್ತಿದ್ದರು. "ಹೊರಡೋಣ. ಅಣ್ಣಾ. ಹೊತ್ತಾಯಿತು" ಈಗ ಬಂದವನು ಕೂಗಿದ.

ಜೇಸುದಾಸನ್ ತನ್ನ ಕತ್ತು ಹೊರಳಿಸಿ ಹೇಳಿದ "ಇಲ್ಲಿ ಯಾರಿದ್ದಾರೆ ನೋಡು! ಪಂಡಿತ! ಆತನನ್ನು ಹಾಯ್ದು ಹೋಗುವಾಗ ನಾವು ವಂದಿಸಬೇಡವೆ?"

"ಓ, ಇರಲಿ ಬಾ." ಇನ್ನೊಬ್ಬ ಹುಡುಗ ಅಸಹನೆಯಿಂದ ಹೇಳಿದ "ಈ ರೀತಿಯಾದರೆ ನಾವು ಹೊತ್ತಿಗೆ ಸರಿಯಾಗಿ ತಾತ ನಟೇಶನ್‌ನ ಗೋಷ್ಠಿಗೆ ಹೋಗುವುದಕ್ಕೆ ಆಗುವುದಿಲ್ಲ."

ಜೇಸುದಾಸನ್ ಭುಜಕುಣಿಸಿ ಆಡಂಬರದ ಸೌಜನ್ಯದಿಂದ ಪಕ್ಕಕ್ಕೆ ಸರಿದು ಹಣೆಗೆ ಕೈಯಿಟ್ಟು ಕೃತ್ರಿಮ ವಂದನೆ ಸಲ್ಲಿಸಿದ. ತಲೆಯನ್ನು ಸೆಟೆದು ಎತ್ತಿ ಕೊಂಡು ರಾಮನ್ ನಿಧಾನವಾಗಿ ಅಡಿಯಿಡುತ್ತ ಮುನ್ನಡೆದ–ಓಡಬೇಕೆಂಬ ಬಯಕೆಯನ್ನು ಅದುಮಿಕೊಂಡು.

ಅವನ ಹಿಂದೆ ಜೇಸುದಾಸನ್ನನ ಅಣಕ ಕೇಳಿ ಬಂದಿತು. "ಪಂಡಿತನಿಗೆ ಜಯವಾಗಲಿ ! ಪಂಡಿತನಿಗೆ ವಂದನೆ ಸಲ್ಲಿಸಿ" ಇಬ್ಬರು ಹುಡುಗರೂ ರಸ್ತೆಯಲ್ಲಿ ಹೊರಟು ಕಾಣದಾದಾಗ ಆ ಅಣಕದ ಮಾತು ಕೇಳದಾಯಿತು.

ಅಂದು ರಾತ್ರಿ ರಾಮನ್ ತನ್ನ ತಾಳೆಚಾಪೆಯ ಮೇಲೆ ಮಲಗಿದಾಗ ಬಹಳ ಹೊತ್ತು ಎಚ್ಚರವಾಗಿಯೇ ಇದ್ದ. ಬೇಡವೆಂದರೂ ಜೇಸುದಾಸನ್ನನ ಕೊಂಕುನುಡಿಗಳೇ ಮತ್ತೆ ಮತ್ತೆ ಮನದಲ್ಲಿ ಪ್ರತಿಧ್ವನಿಸುತ್ತಿದ್ದವು. ದಾರಿಯಲ್ಲಿ ಸರಿಯಾಗಿ ನೋಡಿದ್ದಿದ್ದರೆ ಜೇಸುದಾಸನ್ ಬರುತ್ತಿದ್ದುದು ಕಾಣಿಸುತ್ತಿತ್ತು. ತಾನು ಇಳಿಜಾರಿನಲ್ಲಿ ಪಕ್ಕಕ್ಕೆ ಇಳಿದು ನಡೆದು ಅವನನ್ನು ಸಂಧಿಸುವುದನ್ನೇ ತಪ್ಪಿಸಬಹುದಾಗಿತ್ತು. ಹೇಗಿದ್ದರೂ ಜೇಸುದಾಸನ್ ಅವನನ್ನು ಅಣಕಿಸುತ್ತಲೇ ಇದ್ದ, ಆದರೆ ಮುಖಾಬಿಲೆಯಾಗುವ ಅಗತ್ಯವಿರುತ್ತಿರಲಿಲ್ಲ.

ಜೇಸುದಾಸನ್ ತನ್ನ ಅತ್ಯಂತ ನಿಕಟ ಸ್ನೇಹಿತನಾಗಿದ್ದ, ತಾವಿಬ್ಬರೂ ತಾಂಡ್ಯದ ಇತರ ಹುಡುಗರೊಡನೆ ಕಣಿವೆಗಳಲ್ಲಿ ಓಡಾಡುತ್ತ ಬೆಟ್ಟದ ರಸ್ತೆಗಳಲ್ಲಿ ಚಕ್ರವನ್ನಾಡಿಸುತ್ತ ಗಂಟೆಗಟ್ಟಲೆ ಕಳೆಯುತ್ತಿದ್ದ ಆ ಹಿಂದಿನ ದಿನಗಳನ್ನೂ ರಾಮನ್ ಜ್ಞಾಪಿಸಿಕೊಂಡ. ರಾಮನ್ ಶಾಲೆಗೆ ಹೋಗಲು ಆರಂಭಿಸಿದ ಮೇಲೂ ಅವನು ದಿನದ ಕೆಲಸಗಳನ್ನು ಮುಗಿಸಿ ಪಾಠಗಳನ್ನು ಸಿದ್ಧಪಡಿಸಿ ಕೊಂಡು ಆಮೇಲೆ ವಿರಾಮ ಮಾಡಿಕೊಂಡು ಇತರ ಹುಡುಗರೊಡನೆ ಕೂಡಿ ಆಟದನಂತರ ಎಲ್ಲರೂ ತಾತ ನಟೇಶನ್‌ನ ಬೆಂಕಿ ಗೋಷ್ಠಿಗೆ ಹೋಗುತ್ತಿದ್ದರು. ಆದರೆ ತನ್ನ ವಯಸ್ಸಿನ ಇತರ ಹುಡುಗರೊಡನೆ ಸರಿಸಮನಾಗಲು ರಾಮನ್ ಪಾಠಗಳಿಗೆ ಹೆಚ್ಚು ಹೆಚ್ಚು ಸಮಯ ವಿನಿಯೋಗಿಸಲಾರಂಭಿಸಿದ. ಮನೆ ಕೆಲಸ ಮುಗಿದೊಡನೆ ಒಬ್ಬನೇ ಹೊರಟು ತನ್ನ ಪಠ್ಯಪುಸ್ತಕಗಳಲ್ಲೊಂದನ್ನು

ಓದುವುದರಲ್ಲೋ, ನೆಲದ ಮೇಲೆ ಒಂದು ಜಾಗ ಹುಡುಕಿ ಕೋಲಿನಿಂದ ತಾನು ಶಾಲೆಯಲ್ಲಿ ಕಲಿತ ಶಬ್ದಗಳನ್ನು ಬರೆಯುವುದರಲ್ಲೋ ಮಗ್ನನಾಗುತ್ತಿದ್ದ. ಸಂಜೆ ಕತ್ತಲಾಗುತ್ತ ಬಂದು ಓದಲು ಅಥವಾ ಬರೆಯಲು ಸಾಧ್ಯವಾಗದಿದ್ದ ಮೇಲೆಯೇ ಅವನು ಎದ್ದು ಪಾಠಗಳನ್ನು ಬದಿಗಿರಿಸಿ ಇತರರ ಜತೆ ಬೆಂಕಿ ಗೋಷ್ಠಿಯ ಕಥೆಗಳನ್ನು ಕೇಳಲು ಹೋಗುತ್ತಿದ್ದ.

ಆದರೆ ಕ್ರಮೇಣ ತಾತ ನಟೇಶನ್‌ನ ಕಥೆಗಳು ಅವುಗಳ ಹಿಂದಿನ ಸ್ವಾರಸ್ಯ ಕಳೆದುಕೊಂಡಿರುವಂತೆ ರಾಮನ್‌ಗೆ ಅನ್ನಿಸಿತ್ತು, ಬೆಳಕಿಲ್ಲದಿದ್ದರೂ ಮನೆ ಯಲ್ಲೇ ಕುಳಿತು ತಾನು ಓದಿದ್ದ ಕಥೆಗಳನ್ನು ಜ್ಞಾಪಿಸಿಕೊಳ್ಳುತ್ತ ಅವಕ್ಕೆ ತನ್ನ ಕಲ್ಪನೆಯನ್ನು ಸೇರಿಸುತ್ತ ಮುಂದೆ ತಾನು ಆಶಿಸಿದಂತೆ ಪಂಡಿತನಾದಾಗ ಎಂಥ ಜೀವನ ನಡೆಸುವನೆಂಬುದನ್ನು ಯೋಚಿಸುತ್ತ ಕುಳಿತಿರುವುದೇ ಅವ ನಿಗೆ ಹೆಚ್ಚು ಸ್ವಾರಸ್ಯವೆನಿಸಿತು. ಹೀಗಾಗಿ ಜೇಸುದಾಸನ್ ಮತ್ತು ಇತರರು ಕರೆ ಯಲು ಬಂದಾಗ ಆತನು ಏನಾದರೊಂದು ನೆಪ ಹೇಳಿ ಹಿಂದುಳಿಯುತ್ತಿದ್ದ.

"ಈ ಸಲವಾದರೂ ನೀನು ಏಕೆ ಬರಬಾರದು ?" ಎಂದು ಜೇಸುದಾ ಸನ್ ಒಂದು ಸಂಜೆ ತಾತ ನಟೇಶನ್‌ನ ಗೋಷ್ಠಿಗೆ ಮುಂಚೆ ರಸ್ತೆಯಲ್ಲಿ ಚಕ್ರ ಓಡಿಸುವ ಸ್ಪರ್ಧೆಯೊಂದಕ್ಕೆ ಬರಲು ರಾಮನ್ ನಿರಾಕರಿಸಿದಾಗ ಕೇಳಿದ,

"ನಾನು ಓದಬೇಕು. ಈ ಹೊತ್ತು ಹೊಸ ಪುಸ್ತಕವೊಂದನ್ನು ಆರಂಭಿ ಸಿದೆವು" ರಾಮನ್ ವಿವರಿಸಿದ.

ಜೇಸುದಾಸನ್ ನಿಷ್ಠುರವಾಗಿ ಥಟ್ಟನೆ ಹೇಳಿದ. "ನಿಜ ಹೇಳಲು ಏಕೆ ಹಿಂಜರಿಯುವೆ ? ಈಗ ನೀನು ಓದುತ್ತೀಯ, ನಮಗಿಂತ ಉತ್ತಮ. ಆದ್ದ ರಿಂದ ಬರಲು ಇಷ್ಟವಿಲ್ಲ ಎಂದು ಹೇಳಬಾರದೆ ?"

"ಅದು ನಿಜವಲ್ಲ" ರಾಮನ್ ವಿರೋಧಿಸಿ ಹೇಳಿದ, "ಬರಲೇನೋ ಇಷ್ಟ ವಿದೆ; ಮತ್ತಾವಾಗಲಾದರೂ ಬರುತ್ತೇನೆ"

"ಇನ್ನೊಮ್ಮೆ! ಯಾವಾಗಲೂ ಇನ್ನೊಮ್ಮೆಯೇ ! ಎಣಿಕೆಗೂ ಸಿಗದಷ್ಟು ಸಲ ಆ ಮಾತು ಹೇಳಿದ್ದೀಯ. ನೀನೇಕೆ ಬದಲಾಯಿಸಿದ್ದೀಯೆಂಬುದು ನಮಗೆ ಗೊತ್ತಿಲ್ಲ ಅಂದುಕೊಂಡಿದ್ದೀಯ? ಪುಸ್ತಕಗಳೇ ನಿನಗೆ ಹೆಚ್ಚಾದರೆ ಒಳ್ಳೆಯದು !" ಒಮ್ಮೆಯೂ ಹಿಂದಿರುಗಿ ನೋಡದೆ ಜೇಸುದಾಸನ್ ಹೊರಟು ಹೋದ.

ಅವನು ಹೋಗುವುದನ್ನೇ ನೋಡುತ್ತ ರಾಮನ್ ತಾನು ಬರುವುದಿಲ್ಲವೆಂದು

ಹೇಳದಿರಬಹುದಾಗಿತ್ತೆಂದು ವಿಷಾದದಿಂದ ಯೋಚಿಸಿದ. ಮುಂದಿನ ಸಲ ಅವರೊಡನೆ ಹೋಗುತ್ತೇನೆಂದು ನಿರ್ಧರಿಸಿದ, ಆದರೆ ಆ ಮುಂದಿನ ಸಲ ಅನ್ನುವುದು ಬರಲೇ ಇಲ್ಲ,

ಅನೇಕ ದಿನ ರಾಮನ್ ಜೇಸುದಾಸನ್‌ನನ್ನು ನೋಡಲೇ ಇಲ್ಲ. ಒಂದು ದಿನ ಅವನನ್ನು ನೋಡಲು, ಪ್ರಾಯಶಃ ತಾನು ಬರಲು ನಿರಾಕರಿಸಿದ್ದುದರಿಂದ ಅವನ ಮನಸ್ಸಿಗೆ ನೋವಾಗಿದ್ದರೆ ಅದಕ್ಕೆ ವಿಷಾದಿಸುವುದಾಗಿ ಹೇಳಲು ರಾಮನ್ ತಾನೇ ಇಳಿಜಾರಿನಲ್ಲಿ ಕೆಳಕ್ಕಿಳಿದು ಜೇಸುದಾಸನ್‌ನ ಮನೆಯ ಕಡೆಗೆ ಹೊರಟ. ಅರ್ಧ ದಾರಿಯಲ್ಲೇ ಜೇಸುದಾಸನ್ ಮತ್ತು ಇತರ ಹುಡುಗರು ಕಂಡರು. ಅವರನ್ನು ಕೂಡಲು ರಾಮನ್ ಧಾವಿಸುವುದರಲ್ಲಿದ್ದಾಗ ಜೇಸುದಾಸನ್ ಇವನನ್ನು ನೋಡಿ ಬಾಯಿಗೆ ಕೈಗಳನ್ನು ಮುಚ್ಚಿಕೊಂಡು ಗಟ್ಟಿಯಾಗಿ "ಅದೋ ನೋಡಿ! ಪುಸ್ತಕದ ಹುಳು, ಪಂಡಿತನಿಗೆ ಜೈ"ಎಂದು ಕೂಗಿದ; ಅಣಕಿಸಿ ಬಾಗಿ ವಂದಿಸಿದ, ಅವನು ನಾಯಕನಾಗಿದ್ದುದರಿಂದ ಇತರ ಹುಡುಗರೂ ಹಾಗೆಯೇ ಮಾಡಿದರು.

ಈ ಅನಿರೀಕ್ಷಿತ ನಿಂದೆಯಿಂದ ನೊಂದ ರಾಮನ್ ಇನ್ನೆಲ್ಲಿಗೋ ಹೊರಟವನಂತೆ ಮುಂದಕ್ಕೆ ನಡೆದ. ಇದಾದ ಮೇಲೆ ಜೇಸುದಾಸನ್‌ನನ್ನು ಸಂಧಿಸುವ ಪ್ರಸಂಗವೇ ಬಾರದಂತೆ ನೋಡಿಕೊಂಡು ದೂರದಿಂದ ತನ್ನನ್ನು ಬೆನ್ನಟ್ಟಿ ಬರುತ್ತಿದ್ದ ಅಣಕದ ಕೂಗುಗಳನ್ನು ನಿರ್ಲಕ್ಷಿಸಿದಂತೆಯೇ ನಡೆದಿದ್ದ. ಈ ಹೊತ್ತಿನವರೆಗೆ ಅವನು ಆ ಇನ್ನೊಬ್ಬ ಹುಡುಗನನ್ನು ಕಂಡಿರಲಿಲ್ಲ.

ಜೇಸುದಾಸನ್ ಮತ್ತು ಇತರ ಹುಡುಗರು ತನಗೆ ಎದುರು ಬೀಳಲು ಕಾರಣವೇನು ? ಹೊಟ್ಟೆಕಿಚ್ಚೇ ಇರಬೇಕೆಂದು ರಾಮನ್ ಯೋಚಿಸಿದ. ನನಗೆ ಶಾಲೆಗೆ ಹೋಗಲು ಅವಕಾಶವಿದೆ, ಅವರಿಗಿಲ್ಲ: ಆದರಿಂದ ದ್ವೇಷ.

ಆದರೆ ಇದಕ್ಕೆ ಇನ್ನೊಂದು ಕಾರಣವಿರಬೇಕೆಂಬುದೂ ಅವನ ಮನಸ್ಸಿಗೆ ತಿಳಿದಿತ್ತು.

"ಓದು ಅವನನ್ನು ಇತರರಿಂದ ಬೇರೆಯಿರಿಸುವುದು; ಇನ್ನು ಅವನು ನಮ್ಮವರಲ್ಲೊಬ್ಬನಾಗಿರಲಾರ." ಇವು ಅವನ ದೊಡ್ಡಪ್ಪನ ಮಾತುಗಳು. ಓದಿ ಬರೆಯಲು ಕಲಿಯುದಿದ್ದುದೇ ಎಲ್ಲ ತೊಂದರೆಗೂ ಕಾರಣ.

ಇದಕ್ಕೆ ತನ್ನದೇ ತಪ್ಪೆಂದು ರಾಮನ್ ಭಾರವಾದ ಹೃದಯದೊಂದಿಗೆ

ಯೋಚಿಸಿದ. ಶಾಲೆಗೆ ಹೋಗುವುದರ ತಪ್ಪಲ್ಲ; ಇತರ ಹುಡುಗರದೂ ತಪ್ಪಲ್ಲ. ಎಷ್ಟೋ ಸಲ ನಾನು ಅವರುಗಳೊಡನೆ ಹೋಗಬಹುದಾಗಿತ್ತು. ಆದರೆ ಪಾಠ ಓದುವುದೇ ಹೆಚ್ಚು ಸ್ವಾರಸ್ಯವೆನಿಸಿತ್ತು, ತಾತ ನಟೇಶನ್‌ನ ಕಥೆಗಳು ರುಚಿಸದಿದ್ದರೂ ಆತನ ಗೋಷ್ಠಿಗೆ ಹೋಗಬಹುದಾಗಿತ್ತು. ನಾನು ಬರೀ ಸಬೂಬುಗಳನ್ನು ಕೊಟ್ಟು ತಪ್ಪಿಸಿಕೊಳ್ಳುತ್ತಿದ್ದೆನೆಂಬುದು ಜೇಸುದಾಸನ್‌ಗೆ ಗೊತ್ತು, ಅದು ಅವನ ತಪ್ಪೆ ? ಆದರೆ ಶಾಲೆಯೆಂದರೆ ನನಗೆ ಏನು ಭಾವನೆ ಯಿದೆಯೆಂಬುದನ್ನು ಜೇಸುದಾಸನ್ ಅರಿಯಲಾರನೆ ? ಮೊದಲಲ್ಲಿ ಅದು ಅಷ್ಟೊಂದು ಸ್ವಾರಸ್ಯವಾಗಿತ್ತು; ಚೆನ್ನಾಗಿ ಓದಿ ಇತರ ಹುಡುಗರಿಗೆ ಸರಿಸಮ ನಾಗಬೇಕಾಗಿತ್ತು, ಆಮೇಲೆ ನಾನು ಓದಿಗೆ ಕಡಿಮೆ ವೇಳೆ ಕಳೆದು ಹೆಚ್ಚು ಹೊತ್ತನ್ನು ಇತರ ಹುಡುಗರೊಡನೆ ಕಳೆಯುತ್ತಿದ್ದೆ.

ತನ್ನ ಮತ್ತು ಜೇಸುದಾಸನ್‌ನ ನಡುವಣ ಬಿಕ್ಕಟ್ಟಿನ ವಿಷಯ ತಂದೆ ಗಾಗಲಿ, ದೊಡ್ಡಪ್ಪನಿಗಾಗಲಿ ಎಷ್ಟು ಗೊತ್ತಿದ್ದೀತೆಂದು ಅವನು ಯೋಚಿಸಿದ. ಅವರಿಗೆ ನಿಜವಾಗಿ ಸ್ವಲ್ಪವಾದರೂ ತಿಳಿದೇ ಇರಬೇಕು. ಕಾಲು ಕುಂಟಾಗಿ ಬಹು ವೇಳೆಯನ್ನು ಮನೆಯಲ್ಲೇ ಕಳೆಯುತ್ತಿದ್ದ ದೊಡ್ಡಪ್ಪನಿಗಂತೂ ಖಂಡಿತ ಗೊತ್ತೇ ಇರಬೇಕು. ಇಲ್ಲ, ಜೇಸುದಾಸನ್‌ನ ಅಣಕದ ಕೂಗನ್ನು ಇಡೀ ತಾಂಡ್ಯವೇ ಕೇಳಿದ್ದೀತು, ಈಗಲೂ ರಾಮನ್‌ನ ದೊಡ್ಡಪ್ಪ ಇದು ಕೂಡಾ ತನ್ನ ಭವಿಷ್ಯ ಸತ್ಯವೆಂದು ತೋರಿಸುವುದೆಂದು ಹೇಳಿಕೊಳ್ಳುತ್ತಿರಬಹುದು.

"ಆದರೆ ಅದು ನಿಜವಲ್ಲವೆಂದು ನಾನು ಬಲ್ಲೆ."ರಾಮನ್ ತನ್ನಲ್ಲೇ ಅಂದು ಕೊಂಡ, "ನನ್ನನ್ನು ತಂದೆ ಶಾಲೆಗೆ ಕಳಿಸಿದುದೇ ಸರಿಯೆಂದು ನನಗೆ ಗೊತ್ತು. ಜೇಸುದಾಸನ್‌ನ ಸ್ನೇಹ ಕಳೆದುಕೊಳ್ಳಲು ನನಗೆ ಇಷ್ಟವಿರಲಿಲ್ಲ. ಆದರೆ ನಾನು ಪರಿಸ್ಥಿತಿ ಅರಿಯುವ ಹೊತ್ತಿಗೆ ಕಾಲ ಮೀರಿತ್ತು. ಅದು ನನ್ನ ತಪ್ಪೇ ವಿನಾ ಶಾಲಾ ವ್ಯಾಸಂಗದ ತಪ್ಪಲ್ಲ."

ಮತ್ತೆ ಆ ಹುಡುಗನ ಸ್ನೇಹ ಗಳಿಸಿಕೊಳ್ಳಲು ಏನಾದರೂ ಮಾರ್ಗವಿರ ಬಾರದೇಎಂದು ರಾಮನ್ ಯೋಚಿಸಿದ.ಆದರೆಈಗ ತಾನು ಮತ್ತೆಜೇಸುದಾಸನ್‌ನ ಬಳಿಗೆ ಹೋಗುವುದು ಸಾಧ್ಯವಿಲ್ಲ; ಆ ಅಣಕದ ಕೂಗಿನ ಪ್ರತಿಧ್ವನಿ ಅವ ನನ್ನು ಹೋಗಗೊಡುವುದಿಲ್ಲ. ಒಮ್ಮೆ ಅತ್ಯಂತ ನಿಕಟ ಗೆಳೆಯರಾಗಿದ್ದ ಅವ ರಿಬ್ಬರ ನಡುವೆ ಈಗ ಅವರಿಬ್ಬರೂ ನಿವಾರಿಸಲಾಗದಂಥ ಅಂತರ ಮೂಡಿತ್ತು.

"ಒಂದು ವಿಷಯದಲ್ಲಂತೂ ದೊಡ್ಡಪ್ಪ ಹೇಳುವುದು ನಿಜ; ಮೊದಲಿಗ ನಾಗುವುದು ಸುಲಭವಲ್ಲ" ನೊಂದ ಮನದಲ್ಲಿ ರಾಮನ್ ಯೋಚಿಸಿದ.

ಸಿಡಿಯುವಂತಿದ್ದ ತಲೆಯನ್ನು ಸುತ್ತಿದ್ದ ಕೈ ಮೇಲಿಟ್ಟು ರಾಮನ್ ಪ್ರಯತ್ನಪಟ್ಟು ತನ್ನ ಯೋಚನಾಲಹರಿಯನ್ನು ಜೇಸುದಾಸನ್‌ನಿಂದ ಬದಲಿಸಿ ಮರ್ಕಿನ್ ಮಹಿಳೆಯತ್ತ, ನಾಳೆ ತಾನು ಖಂಡಿತ ಪತ್ತೆಮಾಡಿ ಕೀಳುವ ಬೆಟ್ಟದ ಹೂಗಳತ್ತ ಹೊರಳಿಸಿದ, ಕೊನೆಗೆ ಅವನು ನಿದ್ರೆ ಹೋದಾಗ ತಾನೆಂದೂ ನೋಡದಿದ್ದಂಥ ಅಪೂರ್ವ ಹೂವುಗಳಿಂದ ತುಂಬಿದ್ದ ಅರಣ್ಯವೊಂದರ ಕನಸು ಕಂಡ. ಮರ್ಕಿನಮ್ಮನಿಗೆ ಹೂಗಳು ! ಆದರೆ ಒಂದೊಂದು ಹೂವನ್ನು ಕೀಳಲು ತಾನು ಬಾಗಿದಾಗಲೂ ಅದು ಕಾಣದಾಗಿಬಿಡುವುದು; ಹೀಗಾಗಿ ಕೊನೆಗೆ ಹೂಗಳಿಲ್ಲದ ಅರಣ್ಯದಲ್ಲಿ ಏಕಾಂಗಿಯಾಗಿದ್ದ ಅವನು ನೆಲಕ್ಕೆ ಬಿದ್ದು ಗಟ್ಟಿಯಾಗಿ ಅತ್ತ.

## ೭

ಈ ಒಮ್ಮೆಯಾದರೂ ರಾಮನ್ ಪೈನ್ ಚಿಪ್ಪುಗಳನ್ನಾರಿಸಲು ಹೊರಡುವುದಕ್ಕೆ ಉತ್ಸಾಹಿತನಾಗಿದ್ದ. ಬೆಟ್ಟದ ಹೂಗಳ ವಿಷಯ ಯಾರಿಗೂ ಹೇಳಲಿಲ್ಲ; ಹೂಗಳನ್ನು ಕಿತ್ತು ತಂದು ತಾನು ಗಳಿಸಿದ ಹಣ ತೋರಿಸಿ ಇತರರನ್ನು ಅಚ್ಚರಿಗೊಳಿಸಬೇಕೆಂದು ಅವನು ಇಚ್ಛಿಸಿದ್ದ. ಆದರೆ ಯಶಸ್ಸು ಖಾತರಿಯಿಲ್ಲವಾಗಿದ್ದಂಥ ಶೋಧನೆಗೋಸ್ಕರ ಅವನು ಪೈನ್ ಚಿಪ್ಪುಗಳನ್ನಾರಿಸುವುದರಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ. ಹೂಗಳನ್ನು ಆಯ್ದು ಹಣ ಗಳಿಸಬಹುದೆಂದು ಒಮ್ಮೆ ಅವನು ತೋರಿಸಿದನೆಂದರೆ ಅದಕ್ಕೆ ಸಮಯ ವಿನಿಯೋಗಿಸಲು ಅವನಿಗೆ ಅನುಮತಿ ಸಿಗುವುದು. ಆದರೆ ಈಗ ಅವನು ಪೈನ್ ಚಿಪ್ಪುಗಳಿಗಾಗಿ ತಾಂಡ್ಯಗಳು ಮತ್ತು ಬಂಗಲೆಗಳಿಂದ ಸಾಕಷ್ಟು ದೂರಕ್ಕೆ ಹೋಗಬೇಕಾಗುವುದು; ಅಲ್ಲಿ ಸಿಗುವ ಹೂಗಳು ಬಂಗಲೆ ಹೂಗಳಾಗಿರದೆ ನಿಜವಾಗಿ ಕಾಡು ಹೂಗಳಾಗಿರುತ್ತವೆ.

ಬಗಲಿಗೆ ಖಾಲಿ ಚೀಲಗಳನ್ನು ಇಳಿಬಿಟ್ಟು ರಾಮನ್ ಮತ್ತು ವಾಸಂತಿ ತಮ್ಮ ಮನೆಯಿಂದ ಸ್ವಲ್ಪ ದೂರದಲ್ಲಿ ಕಣಿವೆ ಹತ್ತಿ ಪೈನ್ ತೋಪಿಗೆ ತೆರಳಿದರು ಅಲ್ಲಿ ಮರಗಳು ಒತ್ತೊತ್ತಾಗಿ ಬೆಳೆದಿದ್ದವು. ನೆಲದ ಮೇಲೆ ಹುಲ್ಲು ಬೆಳೆದು ನಡೆಯಲು ಮೆತ್ತಗಿತ್ತು. ಮುಂಗಾರು ಗಾಳಿ ಬಲವಾಗಿ ಬೀಸಿದ್ದುದರಿಂದ ಅನೇಕ ಚಿಪ್ಪುಗಳು ನೆಲಕ್ಕೆ ಉದುರಿದ್ದವು. ಕೂಡಲೆ ವಾಸಂತಿ ಅದನ್ನು ಚೀಲಕ್ಕೆ ತುಂಬಲಾರಂಭಿಸಿದಳು. ರಾಮನ್ ಸ್ವಲ್ಪ ನಿಧಾನವಾಗಿ ಆರಂಭಿಸಿದ. ಬೆಟ್ಟದ ಹೂಗಳ ಯೋಚನೆ ಅವನನ್ನು ಗಡಿಬಿಡಿಗೀಡುಮಾಡಿತ್ತು. ಒಂದು ಚಿಪ್ಪನ್ನು ಆರಿಸಲು ಕೆಳಕ್ಕೆ ಬಾಗುವಾಗಲೂ ಹಾಗೇ ಕಣ್ಣು ಹೊರಳಿಸಿ ಹೂಗಳಿಗಾಗಿ ಹುಡುಕುತ್ತಿದ್ದ. ಯಾವುವೂ ಕಾಣಿಸಲಿಲ್ಲ.

ವಿಚಿತ್ರ, ಇಲ್ಲಿ ಎಷ್ಟು ಕಡಿಮೆ ಗಿಡಗಳು ಬೆಳೆಯುತ್ತವೆಂಬುದನ್ನು ಅವನು

ಈ ಮುಂಚೆ ಗಮನಿಸಿಯೇ ಇರಲಿಲ್ಲ. ಬೆಳೆದ ಕೆಲವು ತೆಳ್ಳಗೆ ಕಡಿಮೆ ಎತ್ತರಕ್ಕೆ ಇರುತ್ತಿದ್ದು ಹೂಗಳೇನೂ ಬಿಡುತ್ತಿರಲಿಲ್ಲ. ಪ್ರಾಯಶಃ ಇಲ್ಲಿ ಅಷ್ಟಾಗಿ ಬಿಸಿಲು ಬಾರವೇನೊ! ರಾಮನ್ ಪ್ರಯತ್ನಪಟ್ಟು ನಿರುತ್ಸಾಹವನ್ನು ದೂರವಾಗಿರಿಸಿದ. ಬೆಟ್ಟದ ಹೂಗಳನ್ನು ಆರಿಸುವುದು ಬಹು ಸುಲಭವೆಂದು ಅವನು ಅಂದು ಕೊಂಡಿದ್ದ.

ಆದರೆ ಹುಡುಕಬೇಕಾದ ಇನ್ನೂ ಅನೇಕ ಸ್ಥಳಗಳಿದ್ದವು. ಚಿಪ್ಪುಗಳನ್ನು ಆಯ್ದು ಕೊಂಡೊಯ್ದು ಮಾರಾಟ ಮಾಡುವ ವೇಳೆಗೆ ಸಂಜೆಯಾಗಿಬಿಡುವುದು, ಹೂಗಳನ್ನಾರಿಸಲು ಹೊತ್ತು ಸಿಗುವುದಿಲ್ಲ. ಏನು ಮಾಡುವುದು ?

ವಿಶ್ರಮಿಸಲು ಕೂಡುವ ವೇಳೆಗೆ ವಾಸಂತಿ ತನ್ನ ಬಳಿಯಿದ್ದ ಎರಡು ಚೀಲಗಳನ್ನು ತುಂಬಿದ್ದಾಗಿತ್ತು. ರಾಮನ್ ಒಂದು ಚೀಲ ತುಂಬಿ ಎರಡನೆಯ ದಕ್ಕೆ ಚಿಪ್ಪುಗಳನ್ನು ತುಂಬಲು ಆದೇ ತಾನೇ ಶುರುಮಾಡಿದ್ದ. ಚೀಲಗಳನ್ನು ಒಂದು ಮರದ ಬುಡಕ್ಕೆ ಒರಗಿಸಿ ಇಬ್ಬರೂ ಕಣಿವೆಯ ತಳದಲ್ಲಿ ಹರಿಯುತ್ತಿದ್ದ ಪುಟ್ಟ ತೊರೆಯಲ್ಲಿ ನೀರು ಕುಡಿಯಲು ಹೋದರು. ತೊರೆಯ ಪಾತ್ರದಲ್ಲಿ ಬಯಲು ಪ್ರದೇಶವಿತ್ತು; ಎರಡು ದಡಗಳಲ್ಲೂ ದ್ರಾಕ್ಷಿ ಬಳ್ಳಿಗಳು, ಜರೀಗಿಡ ಗಳು ದಟ್ಟವಾಗಿ ಬೆಳೆದಿದ್ದವು. ಮಕ್ಕಳಿಬ್ಬರೂ ತೊರೆಯ ಪಕ್ಕದಲ್ಲಿ ಕುಳಿತು ದ್ರಾಕ್ಷಿ ಗಿಡಗಳಲ್ಲಿ ಇನ್ನೂ ಉಳಿದಿದ್ದ ಹಣ್ಣುಗಳನ್ನು ಕಿತ್ತು ತಿನ್ನುತ್ತ ವಿಶ್ರಮಿಸಿ ಕೊಂಡರು.

"ಹಾಗೇ ಯೋಚಿಸಿ ನೋಡು, ರಾಮನ್", ವಾಸಂತಿ ಮೇಲುಗಡೆ ಇಳಿ ಜಾರಿನಲ್ಲಿದ್ದ ಮರಗಳನ್ನು ನೋಡುತ್ತ ಹೇಳಿದಳು, "ತಾತ ನಟೇಶನ್ ಸಣ್ಣ ಹುಡುಗನಾಗಿದ್ದಾಗ ಈ ಮರಗಳಿರಲೇ ಇಲ್ಲ. ಬರೀ ಹುಲ್ಲಿತ್ತು; ಕಾಡುಪ್ರಾಣಿ ಗಳಿದ್ದವು. ಈಗ ಕೆರೆಯಿರುವಲ್ಲಿ ಬರೀ ಜೌಗು ಪ್ರದೇಶವಿತ್ತು."

ರಾಮನ್ ತಲೆಯಲ್ಲಾಡಿಸಿದ. "ನನಗೆ ಗೊತ್ತು, ತಾತ ಆ ವಿಷಯ ಹೇಳುವುದನ್ನು ಕೇಳಿದ್ದೇನೆ. ಮರ್ಕಿನ್ ಜನ ಇಲ್ಲಿಗೆ ಬಂದು ಪೈನ್ ಮರ ಗಳನ್ನೂ, ನೀಲಿಗೋಂದಿನ ಮರಗಳನ್ನೂ ಹುಟ್ಟುಹಾಕಿದರು; ಬಂಗಲೆಗಳನ್ನು ನಿರ್ಮಿಸಿದರು; ತೊರೆಗಳಿಗೆ ಅಡ್ಡಗಟ್ಟಿ ಕೆರೆಯನ್ನು ರಚಿಸಿದರು." ಮತ್ತೆ ಅವರ ಹಿಂದಿನ ಆಟ ಶುರುವಾಯಿತು. ತಾತ ನಟೇಶನ್ ಹುಡುಗನಾಗಿದ್ದ ಬೆಟ್ಟ ಗಳಲ್ಲಿ ಇಲ್ಲದಿದ್ದಂಥ ವಸ್ತುಗಳ ಹೆಸರುಗಳನ್ನು ಇಬ್ಬರೂ ಸರದಿ ಪ್ರಕಾರ ಹೇಳು

ವದು. ಹಣ್ಣಿನ ತೋಟಗಳು, ಪೈನ್ ತೋಪುಗಳು, ಬಿಳಿಯ ಬಂಗಲೆಗಳು ಬೇಸಾಯಗಾರರ ತಾಂಡ್ಯಗಳು, ತರಕಾರಿ ಹೊಲಗಳು. ಕೆರೆ–ಹೀಗೆ. ಅದಾದ ಮೇಲೆ ತಾತ ನಟೇಶನ್ ಹುಡುಗನಾಗಿದ್ದಾಗ ಇದ್ದು ಈಗ ಕಾಣದಾಗಿದ್ದಂಥವು: ಹುಲ್ಲು ತುಂಬಿದ ಇಳಿಜಾರುಗಳು, ಹುಲಿಗಳು, ಆಗಾಗ್ಗೆ ಕಾಣಿಸುತ್ತಿದ್ದ ಆನೆಗಳು, ಇತರ ಕಾಡುಪ್ರಾಣಿಗಳು; ಮೂರು ತೊರೆಗಳು ಒಟ್ಟಿಗೆ ಹರಿಯುತ್ತಿದ್ದ ಪಾಚಿ ಪೊರೆ ತುಂಬಿದ ಪ್ರದೇಶ–ಹೀಗೆ. ಕೆಲಸ ಮಾಡುತ್ತ ವಿಶ್ರಮಿಸುತ್ತ ಇರುವಾಗ ಇಬ್ಬರೂ ಈ ಆಟದಲ್ಲಿ ಗಂಟೆಗಟ್ಟಲೆ ಕಳೆಯುತ್ತಿದ್ದರು. ಆದರೆ ಈ ದಿನ ರಾಮನ್ ಅನ್ಯಮನಸ್ಕನಾಗಿದ್ದ; ಅವನ ವಿಮುಖತೆ ಕಂಡು ವಾಸಂತಿಯೂ ಸುಮ್ಮನಾಗಿ ತನ್ನದೇ ಯೋಚನೆಗಳಲ್ಲಿ ಮಗ್ನಳಾದಳು.

ಪದ್ಮಾಸನ ಹಾಕಿ ಕುಳಿತಿದ್ದ ರಾಮನ್ ಬದಲಿಸಿ ಪಕ್ಕಕ್ಕೆ ಹೊರಳಿ ಹೊಟ್ಟೆ ಕೆಳಕ್ಕೆ ಮಾಡಿ ಚಾಚಿ ಮಲಗಿದ; ತಲೆಯನ್ನು ಭುಜಗಳೊಂದಿಗೆ ಎತ್ತರಿಸಿಟ್ಟು ನೋಡುತ್ತ ತೇವದ ನೆಲದ ವಾಸನೆ ಗ್ರಹಿಸಿದ. ಎದುರಿಗೆ ಕಡುಗೆಂಪು ಛಾಯೆ ಕಣ್ಣಿಗೆ ಬಿತ್ತು. ಹಾಗೆಯೇ ದಿಟ್ಟಿಸಿ ನೋಡಿದ. ಅದು ಒಂದು ಹೂ. ಸಣ್ಣದು. ಆದರೂ ಸುಂದರವಾಗಿ, ಸವುರಾಗಿ ಬೆಳೆದಿತ್ತು; ದಳಗಳಲ್ಲಿ ಅಸ್ಪಷ್ಟವಾಗಿ ನೀಲಿ ಛಾಯೆಯಿತ್ತು.

ಒಂದು ಕಾಡು ಹೂ.

ರಾಮನ್ ಒಡನೆ ಎದ್ದು ಕುಳಿತ. "ಹಾ! ಅಲ್ಲಿದೆ ಒಂದು!" ಎಂದು ಗಟ್ಟಿಯಾಗಿ ಉದ್ಗರಿಸಿದ. ವಾಸಂತಿ ಚಕಿತಳಾಗಿ ನೋಡಿದಳು. ರಾಮನ್ ಮುಂದಕ್ಕೆ ಸಾಗಿ ಕಾಂಡದ ಸಹಿತ ಆ ಹೂವನ್ನು ಕಿತ್ತ. ಇದು ಕಾಡು ಹೂವು: ತೋಟದಲ್ಲಿ ಬೆಳೆಯುವಂಥದಲ್ಲ. ತನ್ನ ತೋಟದ ತುಂಬ ಸೊಗಸಾದ ಹೂಗಳು ಅಷ್ಟೊಂದಿರುವಾಗ ಮರ್ಕಿನಮ್ಮ ಇದನ್ನೇಕೆ ಬಯಸುವಳೆಂಬುದು ನಿಗೂಢ ರಹಸ್ಯವೇ ಆಗಿತ್ತು, ಆದರೆ ಆಕೆ ಹೇಳಿದ್ದು ಇಂಥ ಹೂವನ್ನೇ ಎಂಬುದರಲ್ಲಿ ರಾಮನ್‌ಗೆ ಸಂಶಯವಿರಲಿಲ್ಲ. ವಟ್ಟವಾದ ಪೊದೆಯ ಪ್ರದೇಶದಲ್ಲಿ ಅವನು ದೃಷ್ಟಿ ಹಾಯಿಸಿದ. ಅತ್ತಕಡೆ ಇನ್ನೊಂದು ಹೂವಿತ್ತು: ಮತ್ತೊಂದು ಮಂಡಿಯೂರಿ ತೊರೆಯದಂಡೆಯಲ್ಲೇ ನಡೆಯುತ್ತ ಹೂಗಳನ್ನು ಆರಿಸತೊಡಗಿದ.

ಕೂಡಲೆ ಅವನಿಗೆ ವಾಸಂತಿಯ ಅಚ್ಚರಿಯ ದೃಷ್ಟಿ ಮನಸ್ಸಿಗೆ ಬಂದಿತು.

"ವಾಸಂತಿ, ನಿನ್ನ ಶಂಕುಗಳ ಚೀಲಗಳನ್ನು ತೆಗೆದುಕೊಂಡು ಹಿಂದಿರುಗು. ನಾನು ಆಮೇಲೆ ಬರುತ್ತೇನೆ" ಎಂದು ಕರೆದು ಹೇಳಿದ.

"ಆದರೆ ನಿನ್ನ ಚೀಲಗಳು ?" ಆಕೆ ಕೇಳಿದಳು.

"ಯೋಚಿಸಬೇಡ. ನಾ ಬರುವೆ ನೀನು ಬೇಗ ಹೊರಡು" ವಾಸಂತಿ ಕ್ಷಣ ಕಾಲ ಹಿಂದುಮುಂದು ನೋಡಿ ಆಮೇಲೆ ತಿರುಗಿ ಇಳಿಜಾರನ್ನೇರತೊಡಗಿದಳು. ಅವಳು ತನ್ನ ಚೀಲಗಳೆರಡನ್ನು ತೆಳುವಾದ ಭುಜಗಳಿಗೇರಿಸಿದುವನ್ನು ನೋಡುತ್ತ ರಾಮನ್ ತಾನೇನೊ ತಪ್ಪುಮಾಡಿದಂತೆ ಕಸಿವಿಸಿಗೊಂಡ, ಚೀಲಗಳು ಭಾರವಿರ ಲಿಲ್ಲ. ಆದರೆ ದೊಡ್ಡದಾಗಿದ್ದವು. ಶಂಕುಗಳು ಅಳ್ಳಕವಾಗಿ ಹೊಲಿದಿದ್ದ ಗೋಣಿಚೀಲದಿಂದ ಹೊರಕ್ಕೆ ಚಾಚಿ ಚುಚ್ಚುತ್ತಿದ್ದವು. ಕೆಲಹೊತ್ತಿನಲ್ಲೇ ವಾಸಂತಿ ಕಾಣದಾದಳು, ರಾಮನ್ ಮತ್ತೆ ಹೂಗಳನ್ನಾಯಲು ತೊಡಗಿದ. ತೊರೆಯ ಪಾತ್ರದಲ್ಲಿ ಮೆಲ್ಲನೆ ನಡೆಯುತ್ತ ಒಂದೊಂದೇ ಹೂವನ್ನು ಕೀಳುತ್ತ ನಡೆದ: ಸ್ವಲ್ಪ ಹೊತ್ತಿನಲ್ಲೇ ಎರಡು ಕೈಗಳೂ ತುಂಬುವಷ್ಟು ಹೂಗಳು ಕೂಡಿ ದ್ದವು.

ಪೈನ್ ಶಂಕುಗಳ ಚೀಲವನ್ನು ಅವನು ಈಗ ಒಯ್ಯುವಂತಿಲ್ಲ. ಅವು ಇಲ್ಲೇ ಮರದ ಬುಡದಲ್ಲೇ ಇರಲಿ, ಬೇಗನೆ ಹಿಂದಿರುಗಿ ಅದನ್ನೊಯ್ಯುವುದು. ಈಗ ಹೂಗಳು ಮುಖ್ಯ. ಇಷ್ಟೊಂದು ಹೂಗಳಿಗೆ ಒಳ್ಳೇ ದುಡ್ಡು ಸಿಗಬಹುದು. ಮರ್ಕಿನಮ್ಮನೂ ತನ್ನನ್ನು ಹೊಗಳುವಳು. ದಟ್ಟವಾದ ಎಲೆಗಳ ಮಧ್ಯೆ ಈ ಹೂಗಳು ಕಣ್ಣಿಗೆ ಕಾಣವಂತಿರುತ್ತವೆ. ಅವನ್ನು ಎಚ್ಚರಿಕೆಯಿಂದ ಹುಡುಕಿ ಪತ್ತೆ ಮಾಡಬೇಕು.

ಕೈಗಳನ್ನು ಉಪಯೋಗಿಸಲು ಸಾಧ್ಯವಿಲ್ಲದೆ ರಾಮನ್ ಮುಂದಕ್ಕೆ ಬಾಗಿ ಕೈಗಳನ್ನಾಡಿಸುತ್ತ ಇಳಿಜಾರಿನ ಬಹು ಕಡಿದಾದ ಭಾಗವನ್ನು ಹತ್ತಲಾರಂಭಿಸಿದ, ಅತ್ತ ಕಡೆಯಿಂದ ಬಳಸಿ ಹೋಗುವಷ್ಟು ಸಮಯವಿರಲಿಲ್ಲ. ಈಗಾಗಲೇ ತಾನು ಮೊದಲು ಕಿತ್ತಿದ್ದ ಹೂಗಳು ಬಾಡಿಹೋಗಲಾರಂಭಿಸಿದ್ದವು.

ಬೆಟ್ಟದ ಮೇಲಿನ ದೊಡ್ಡ ಬಂಗಲೆ ತಲಪುವ ಹೊತ್ತಿಗೆ ಹೂಗಳೆಲ್ಲ ಕೆಟ್ಟುಹೋಗಿದ್ದವು. ದಳಗಳು ಮುದಿಸಿಕೊಂಡಿದ್ದವು. ಕಾಂಡಗಳು ಜೀವವಿ ಲ್ಲದೆ ಒಣಗಿ ಮುದುಡಿಕೊಂಡಿದ್ದವು. ಈ ಹೂಗಳನು ತೋರಿಸಲು ಮನಸ್ಸಾಗದೆ ಕೈಗಳನ್ನು ಹಿಂದಿಟ್ಟುಕೊಂಡು ರಾಮನ್

ಬಂಗಲೆಯ ವರಾಂಡದ ಒಳಗೆ ಬಂದ.

ಹಿಂದಿನ ದಿನದಂತೆಯೇ ಮರ್ಕಿನಮ್ಮ ವರಾಂಡದ ಒಂದು ಕೊನೆಯಲ್ಲಿ ಬೆಟ್ಟದ ತುದಿಯ ಹಾದಿಯ ಕೆಳಗಡೆ ಹರಡಿದ್ದ ಬಯಲುಸೀಮೆ ವೀಕ್ಷಿಸಲು ಆಗುವಂಥ ಭಾಗದಲ್ಲಿ ಚಕ್ರದ ಕುರ್ಚಿಯಲ್ಲಿ ಕುಳಿತಿದ್ದಳು. ರಾಮನ್‌ನ ಬರಿಗಾಲ ನಡಿಗೆ ಸಪ್ಪಳ ಮಾಡಲಿಲ್ಲ. ಆದ್ದರಿಂದ ಆಕೆ ತಿರುಗಿ ನೋಡಲಿಲ್ಲ.

"ಅಮ್ಮಾ"–ರಾಮನ್ ಲಜ್ಜೆಯಿಂದ ಅನಿಶ್ಚಿತನಾಗಿ ಮಾತಾಡಿದ.

ಮರ್ಕಿನಮ್ಮ ತಿರುಗಿ ನೋಡಿ "ಏನು?" ಅಂದಳು.

"ನಾನು ಬೆಟ್ಟದ ಹೂಗಳನ್ನು ತಂದಿದ್ದೇನಮ್ಮ. ಆದರೆ...."ಅವನು ಮಾತು ನಿಲ್ಲಿಸಿ ಹೂಗಳನ್ನು ಮುಂದಕ್ಕೆ ಹಿಡಿದು ತೋರಿಸಿದ,

"ಅಯ್ಯೋ ಏನನ್ಯಾಯ, ಎಲ್ಲವೂ ಬಾಡಿಹೋಗಿವೆಯಲ್ಲಾ !"

"ಅವನ್ನು ಬಹು ದೂರದಿಂದ ತಂದೆ ಅಮ್ಮಾ, ನಾನು ಬರುತ್ತಿದ್ದಾಗ ಅವು ಹೀಗಾಗಿಹೋದವು"

ಮರ್ಕಿನಮ್ಮ ಕೈನೀಡಿ ಹೂಗಳನ್ನು ತೆಗೆದುಕೊಂಡಳು. "ಈ ರೀತಿಯಲ್ಲಿ ಇವು ನನಗೆ ಉಪಯೋಗಿಸಲು ಬರುವುದಿಲ್ಲ" "ಎಂದು ಆಕೆ ತಲೆ ಅಲ್ಲಾಡಿಸಿ ಕ್ಷಣಕಾಲ ಸುಮ್ಮನಿದ್ದಳು. "ನೋಡು; ಅವರಲ್ಲೂ ವಿಶೇಷವಾಗಿ ನನಗೆ ಬೇಕಾಗಿದ್ದುದು ಈ ಹೂವು" ರಾಮನ್ ಕಸಿವಿಸಿಗೊಂಡು ನಿಂತಿದ್ದ. ಒಂದು ಕಾಲಿನಿಂದ ಇನ್ನೊಂದು ಕಾಲನ್ನು ಹುಷಾರಾಗಿ ಕೆರೆಯುತ್ತ ನಿಂತ. ಹೂ ಕೀಳುವಾಗ ಒಂದು ಗಿಡ ಚುಚ್ಚಿತ್ತು.

"ಬಹಳ ಅನ್ಯಾಯ" ಮರ್ಕಿನಮ್ಮ ತನ್ನಷ್ಟಕ್ಕೆ ತಾನೇ ಹೇಳಿಕೊಂಡಂತೆ ಅನ್ನುತ್ತಿದ್ದಳು. "ನಾನು ನಿಜವಾಗಿ ನಿರೀಕ್ಷಿಸಿಯೇ ಇರಲಿಲ್ಲ–ಆದರೆ ನೀನು ಹೂಗಳನ್ನು ತರಲು ನಿರ್ಧರಿಸಿದ್ದರೆ ಅದಕ್ಕೆ ನಾವು ಏನಾದರೂ ಯೋಚಿಸಬೇಕು. ಹಾಂ, ಕೇಳೋ ಹುಡುಗ–ನಿನ್ನ ಹೆಸರೇನು ? ರಾಮನ್ನೇ ? ಕೇಳು, ರಾಮನ್. ಅಡಿಗೆ ಮನೆಗೆ ಹೋಗಿ ಅಲ್ಲೊಂದು ಸಣ್ಣ ಬುಟ್ಟಿಯಿದೆಯೇ ನೋಡು. ಇದ್ದರೆ ಅವನ್ನು ತಾ. ಹಾಗೆಯೇ ಸುಂದರಂಗೂ ಬರ ಹೇಳು"

ರಾಮನ್ ಹಾಗೇ ಮಾಡಿದ. ಬುಟ್ಟಿ ಸುಲಭವಾಗಿ ಸಿಕ್ಕಿತು. ಪೇಟೆ

ಯಿಂದ ತಂದಮೇಲೆ ಅಂಥ ಹಲವು ಬುಟ್ಟಿಗಳನ್ನು ಅಲ್ಲಿ ಜೋಡಿಸಿಟ್ಟಿತ್ತು. ಒಂದನ್ನು ಆರಿಸಿ ತೆಗೆದುಕೊಂಡು ಅಡಿಗೆ ಮನೆಯಿಂದ ಸುಂದರಂನನ್ನು ಕರೆಯಲು ಹೋದ.

ಮರ್ಕಿನಮ್ಮ ಸುಂದರಂನೊಡನೆ ಸ್ವಲ್ಪ ಮಾತಾಡಿದಳು. ಈ ಸಾರಿ ಇಂಗ್ಲಿಷಿನಲ್ಲಿ ಸಂಭಾಷಿಸಿ ಒಂದು ಕೈಯಿಂದ ಅಗೆಯುವ ಚಿಹ್ನೆಮಾಡಿ ತೋರಿಸಿದಳು. ಪೆರಿಯ ಸುಂದರಂ ಹೂಂಗುಟ್ಟಿ ಮನೆಯೊಳಕ್ಕೆ ನಡೆದು ಕೆಲ ಕ್ಷಣಗಳಲ್ಲೇ ಒಂದು ಕರಣೆಯನ್ನು ತಂದ, ಬಂಗಲೆ ತೋಟಗಳಲ್ಲಿ ಕೆಲಸ ಮಾಡುತ್ತಿದ್ದಾಗ ತನ್ನ ದೊಡ್ಡಪ್ಪ ಅಂಥ ಉಪಕರಣವನ್ನು ಬಳಸುತ್ತಿದ್ದು ದನ್ನು ರಾಮನ್ ನೋಡಿದ. ಅಕ್ಕ ಪಕ್ಕದ ಗಿಡಗಳನ್ನು ಮುಟ್ಟದೆ ಸಣ್ಣ ಪುಟ್ಟ ಕಳೆಗಳನ್ನು ಅಗೆದು ಕೀಳಲು ಅಥವಾ ಹೊಸ ಸಸಿಗಳನ್ನು ಹೂಳಲು ಸಣ್ಣ ಸಲಿಕೆಯಂತಿದ್ದ ಈ ಸಾಧನ ಉಪಯೋಗಕ್ಕೆ ಬರುತ್ತಿತ್ತು,

"ನೋಡು" ಮರ್ಕಿನಮ್ಮ ನಿಧಾನವಾಗಿ ತಮಿಳಿನಲ್ಲಿ ಹೇಳಿದಳು, "ಎಚ್ಚರಿಕೆಯಿಂದ ಕೇಳು. ಹೂವನ್ನು ಕಂಡಾಗ ಅದನ್ನು ಕೀಳಬೇಡ. ಆ ಸಸ್ಯ ವನ್ನೇ ಅಗೆದು ತೆಗೆದು ಬುಡಕ್ಕೆ ಸಾಕಷ್ಟು ಮಣ್ಣು ಮೆತ್ತಿ ಬುಟ್ಟಿಯಲ್ಲಿಡು. ಅದು ಬಾಡದಂತಿರಲು ಸಾಧ್ಯವಾದರೆ ಸ್ವಲ್ಪ ನೀರು ಚಿಮುಕಿಸು, ಗೊತ್ತಾ ಯಿತಾ ?"

ರಾಮನ್ ತಲೆ ಅಲ್ಲಾಡಿಸಿದ. "ಗೊತ್ತಾಯಿತು. ಅಮ್ಮ ಕೇಳುವುದು ಬುಡ, ಎಲೆಗಳು ಎಲ್ಲಾ ಇರುವ ಇಡೀ ಗಿಡ; ಬರೀ ಹೂವಲ್ಲ"

"ಹೌದು. ಆಮೇಲೆ ಇನ್ನೊಂದು ವಿಷಯ, ರಾಮನ್. ದಿನಕ್ಕೆ ನಾಲ್ಕು ಗಿಡಗಳಿಗಿಂತ ಹೆಚ್ಚಿಗೆ ತರದಿದ್ದರೆ ಒಳ್ಳೆಯದು. ಹೆಚ್ಚಿಗೆ ತಂದರೆ ನಾನು ಉಪಯೋಗಿಸುವಹಾಗಿಲ್ಲ, ಪ್ರತಿ ಗಿಡವೂ ಹೊಸ ಮಾದರಿಯದಾಗಿರ ಬೇಕು, ಗಮನವಿಟ್ಟುಕೊ, ನೀನು ಎಂಥ ಗಿಡಗಳನ್ನು ತಂದಿದ್ದೀಯೆಂಬು ದನ್ನು ಜ್ಞಾಪಕವಿಟ್ಟುಕೊಳ್ಳಬೇಕು. ಒಂದೇ ಹೂವು ಎರಡು ಸಲ ಇರುವುದು ಬೇಡ"

"ಹಾಗೇ ಮಾಡುತ್ತೇನೆ ಅಮ್ಮಾ" ರಾಮನ್ ಬುಟ್ಟಿಯನ್ನು ಕರಣೆ ಯನ್ನೂ ಎತ್ತಿಕೊಂಡು ಗೌರವದಿಂದ ವಂದಿಸಿ ಬೀಳ್ಕೊಂಡ.

ಹೊತ್ತು ಮುಳುಗುತ್ತ ಬಂದಿತ್ತು. ರಾಮನ್‌ಗೆ ಹಸಿವಾಗುತ್ತಿತ್ತು.

ಆದರೆ ಮನೆಗೆ ಹೋಗಲು ಮನಸ್ಸಾಗಲಿಲ್ಲ. ದಿನವೆಲ್ಲಾ ಹಣವೇನನ್ನೂ ಗಳಿಸದಿರುವಾಗ ಹೇಗೆ ಹೋಗುವುದು ? ತನ್ನ ಮನೆಗೆ ಸಮೀಪವಾಗಿ ಬಂದಾಗ ರಾಮನ್ ಪಕ್ಕದಲ್ಲಿದ್ದ ಪೊದೆಗಳಲ್ಲಿ ಬುಟ್ಟಿಯನ್ನು' ಕರಣೆಯನ್ನು ಬಚ್ಚಿಟ್ಟು ಪೈನ್ ತೋಪಿಗೆ ಹಿಂದಿರುಗಿದ. ಎರಡನೇ ಚೀಲಕ್ಕೆ ಶಂಕುಗಳನ್ನು ಸರಸರನೆ ತುಂಬಿದ. ಎರಡು ಚೀಲಗಳನ್ನೂ ಹೆಗಲಮೇಲೆ ಹೊತ್ತು ಮತ್ತೆ ರಸ್ತೆಗೆ ಬಂದ. ಶಂಕುಗಳಿಗೆ ಗಿರಾಕಿ ಹುಡುಕಬೇಕಾಗಿತ್ತು.

ಕೊನೆಗೆ ರಾಮನ್ ತನ್ನ ಗುಡಿಸಲು ತಲಪಿದಾಗ ಇಳಿಸಂಜೆಯಾಗಿತ್ತು. ಅಂತೂ ಪೈನ್ ಶಂಕುಗಳನ್ನು ಮಾರಿದ್ದಾಗಿತ್ತು. ಆದರೆ ಸಿಕ್ಕಿದ್ದು ಚೀಲಕ್ಕೆ ಹದಿನೈದು ಪೈಸಾ ಮಾತ್ರ, ಮಾಮೂಲಿನಂತೆ ಇಪ್ಪತ್ತೈದಲ್ಲ. ಇಡೀ ದಿನದ ಕೆಲಸಕ್ಕೆ ತನ್ನ ಬಳಿಯಿದ್ದುದು ಮೂವತ್ತು ಪೈಸಾ ಮಾತ್ರ. ಅರ್ಧ ರೂಪಾಯಿ ಕೂಡಾ ಅಲ್ಲ.

ಅವನ ತಾಯಿ ಒಳಗಡೆ ಒಲೆಯ ಮೇಲೆ ಅನ್ನ ಕಲಕುತ್ತ ಕುಳಿತಿದ್ದಳು.

"ನಾನು ಬಂದಿದ್ದೀನಮ್ಮಾ" ಎಂದು ರಾಮನ್ ಹೇಳುತ್ತ ಆಕೆಯ ಪಕ್ಕದಲ್ಲಿ ನಿಂತ.

"ಬೆಳಗಿನಿಂದ ಏನೂ ತಿಂದಿಲ್ಲ. ನಿನಗೆ ಹಸಿವಾಗಿರಬೇಕು" ತಾಯಿಯ ಮುಖ ನೋಡಲಾಗಲಿಲ್ಲ. ಆಕೆಯ ದನಿ ಮೃದುವಾಗಿತ್ತು. ಆದರೂ ಅದರಲ್ಲಿ ಆಕ್ಷೇಪಣೆಯಿದ್ದಂತೆ ರಾಮನ್‌ಗೆ ಭಾಸವಾಯಿತು. ಕೂಡಲೆ ಅವನು ಬೆಟ್ಟದ ಹೂಗಳ ಕಥೆ ಹೇಳಿದ.

"ಶಂಕುಗಳ ದುಡ್ಡು ಇದೋ, ತೆಗೆದುಕೋ." ಎಂದು ತನ್ನ ಮಾತು ಮುಗಿಸುತ್ತ ಹಣವನ್ನು ಮುಂದೊಡ್ಡಿದ. ತಾಯಿ ಅದನ್ನು ಕೈಗೆತ್ತಿಕೊಂಡು ಮಾತಾಡದೆ ಅದರತ್ತ ನೋಡಿ ಹಣವನ್ನು ಸೊಂಟದಲ್ಲಿ ಸೀರೆಯ ಮಡಿಕೆಯಲ್ಲಿ ಸಿಕ್ಕಿಸಿಟ್ಟಳು.

"ಇನ್ನು ಕೈಕಾಲು ತೊಳೆದುಕೋ ಮಗೂ. ಅನ್ನ ಆಗಿದೆ. ವಾಸಂತಿ. ದಾಸನ್ ಅವರಿಗೂ ಕೈಕಾಲು ಕೊಳೆಯಲು ಹೇಳು."

ಊಟಕ್ಕೆ ಬರೀ ಅನ್ನ. ನೀರು. ಅನ್ನಕ್ಕೆ ಸ್ವಲ್ಪ ಬಿಸಿಯಾದ ಮೆಣಸಿನ ಸಾರು ಅಥವಾ ತರಕಾರಿ ಹುಳಿಯಿದ್ದರೆ ಎಷ್ಟು ಚೆನ್ನಾಗಿರುತ್ತೆ ಅಂದುಕೊಂಡ

ರಾಮನ್. ಪಾಸನ್, ಎರಡು ತುತ್ತು ಅನ್ನ ತಿಂದು ಮುಖ ಸೊಟ್ಟಗೆ, ಮಾಡಿಕೊಂಡು. "ಅಮ್ಮಾ. ಹೀಗೆ ಬರೀ ಅನ್ನ ತಿನ್ನೋಕೆ ನನಗೆ ಆಗದು ಎಂದ.

"ಈ ಹೊತ್ತು ಇರುವುದೇ ಅದು. ಹಳಿ ಮಾಡಲು ಖಾರದ ಸಾಮಾನಿಲ್ಲ" ಆಕೆ ರಾಮನ್‌ನತ್ತ ನೋಡಿದಳೀ ? ರಾಮನ್ ತಲೆ ತಗ್ಗಿಸಿ ಸರಸರನೆ ಅನ್ನ ತಿಂದು ಆದಷ್ಟು ಬೇಗ ಎದ್ದು ಹೋಗಿ ಕೈ ತೊಳೆದುಕೊಂಡು ಮನೆಯ ಹಿಂದು ಗಡೆಗೆ ಹೋಗಿ ಮಣ್ಣಿನ ಇಟ್ಟಿಗೆ ಗೋಡೆಗೆ ಒರಗಿ ಕುಳಿತು ದೀಪಗಳಿಗೆ ಎಣ್ಣೆ ಹೊಂದಿದ್ದ ಇತರ ಗುಡಿಸಲುಗಳವರು ಹೊತ್ತಿಸಿದ ದೀಪಗಳ ಬೆಳಕನ್ನು ವೀಕ್ಷಿಸ ತೊಡಗಿದ.

ಈ ಹೊತ್ತು ಕೆಲಸಗಳೇ ಚೆನ್ನಾಗಿ ನಡೆಯಲಿಲ್ಲ. ಮರ್ಕಿಸಮ್ಮನಿಗೆ ಹೂಗಳನ್ನು ತರುವ ಆತುರದಲ್ಲಿ ಅವನು ತನ್ನ ನಿಜವಾದ ಕೆಲಸಗಳನ್ನೇ ಅಲಕ್ಷಿಸಿದ್ದ. ಮೊದಲು ಪೈನ್ ಶಂಕುಗಳನ್ನು ಮಾರಿ ಆಮೇಲೆ ಹೂಗಳಿಗೆ ಹೋಗಬೇಕಾಗಿತ್ತು; ಅವನ ತಾಯಿ ಏನನ್ನೂ ಹೇಳಲಿಲ್ಲ, ಆದರೆ ಆಕೆಯ ಭಾವನೆ ಹಾಗಿತ್ತೆಂಬುದು ಅವನಿಗೆ ಗೊತ್ತು ಹೂ ಕೀಳುವುದಕ್ಕೆ ತಾನು ವಿನಿ ಯೋಗಿಸಿದ ಹೊತ್ತಿಗೆ ಪ್ರತಿಯಾಗಿ ಏನನ್ನಾದರೂ ತಾನು ತೋರಿಸುವಂತಿದ್ದರೆ! ಆದರೆ ಬಾಡಿ ಸತ್ತಿದ ಹೂಗಳಿಗೆ ಮರ್ಕಿಸಮ್ಮ ಹಣ ಕೊಡುವಳೆಂದಾಗಲಿ, ಹೂಗಳಿಗೆ ಹುಡುಕುತ್ತ ರಾಮನ್ ಶಂಕುಗಳನ್ನು ಮಾರಿ ಗಳಿಸಬಹುದಾಗಿದ್ದ ಹಣ ಕಳೆದುಕೊಂಡನೆಂದು ಆಕೆಗೆ ತಿಳಿದಿದೆಯೆಂದಾಗಲಿ ನಿರೀಕ್ಷಿಸುವುದು ತಪ್ಪು,

ನಾಳೆ ಚೆನ್ನಾಗಿ ಆಗಬೇಕು ಎಂದು ರಾಮನ್ ತನಗೆ ತಾನೆ ಭರವಸೆ ಕೊಟ್ಟುಕೊಂಡ. ಬುಟ್ಟಿ ಮತ್ತು ಕರಣೆ ಗುಡಿಸಲಿನಲ್ಲಿ ಅವನ ಮೂಲೆಯಲ್ಲಿ ಸುರಕ್ಷಿತವಾಗಿದ್ದವು. ನಾಳೆ ತಪ್ಪಾಗದು.

# ೮

ಹಗ್ಗದಿಂದ ತೂಗುವ ಬುಟ್ಟಿಯನ್ನು ತನ್ನ ಭುಜದಿಂದ ಇಳಿಬಿಟ್ಟು ರಾಮುನ್ ಬೆಟ್ಟದ ಮೇಲಿನ ಬಂಗಲೆಗೆ ಮತ್ತೆ ಬಂದಾಗ ಮಧ್ಯಾಹ್ನ ಮುಗಿಯುತ್ತ ಬಂದಿತ್ತು. ಈದಿನ ಪೈನ್ ಶಂಕುಗಳನ್ನು ಮರೆಯದೆ ಆರಿಸಿ ಮುಂಚಿತ ಮಾರಿದ್ದ. ಅವನ ಅಂಗಿಯ ತುದಿಯ ಗಂಟಿನಲ್ಲಿ ಐವತ್ತು ನಯೆ ಪೈಸೇಗಳಿದ್ದುವು. ಇನ್ನು ಇಷ್ಟರಲ್ಲೆ ಇನ್ನೂ ಕೆಲವು ನಾಣ್ಯಗಳು ಆ ಗಂಟನ್ನು ಸೇರುವುವು. ಈ ಸಲ ತಪ್ಪಿದೆ ಎಂದು ತನ್ನನ್ನು ತಾನೇ ನಿಂದಿಸಿಕೊಳ್ಳಬೇಕಿಲ್ಲ.

ಈವೊತ್ತು ಹೂಗಳು ಸಿಗುವುದು ಸುಲಭವಾಗಿರಲಿಲ್ಲ. ಪೈನ್‌ತೋಪಿನ ತೊರೆಯ ಬಳಿಗೆ ಅವನು ಮತ್ತೆ ಹೋಗಿದ್ದ, ಆದರೆ ಅಲ್ಲಿದ್ದ ಹೂಗಳನ್ನೆಲ್ಲ ಅವನು ನಿನ್ನೆಯೇ ಕಿತ್ತಿದ್ದ. ಹೂಗಳಿಲ್ಲದಿದ್ದರೆ ಯಾವಗಿಡ ಯಾವುದೆಂದು ಅವನಿಗೆ ಹೇಳುವುದಕ್ಕಾಗುತ್ತಿರಲಿಲ್ಲ, ಅಲ್ಲದೆ ಚೆನ್ನಾಗಿ ಹೂ ಬಿಟ್ಟ ಗಿಡಗಳೇ ಆ ಮರ್ಕಿನಮ್ಮನಿಗೆ ಬೇಕಿದ್ದೀತು ಎಂಬುದು ಅವನಿಗೆ ಖಂಡಿತ ಗೊತ್ತಿದ್ದಿತು. ಕಣಿವೆಯಲ್ಲಿ ಜಲಪಾತದ ವರೆಗೆ ಹೋದಾಗ ಅವನಿಗೆ ಮತ್ತಷ್ಟು ಹೂಗಳು ಸಿಕ್ಕಿದುವು. ಹಿಂತಿರುಗಿ ಬರುತ್ತ ಅವನು ನಾಲ್ಕು ಸಸಿಗಳನ್ನು ತಂದ, ಒಂದರಲ್ಲಿ ನಸುನೀಲಿ ಹೂ ಗೊಂಚಲಿತ್ತು, ಇನ್ನೊಂದರಲ್ಲಿ ನಸು ಕೆಂಪುಹೂ, ಇನ್ನೆರಡರಲ್ಲಿ ವಿಭಿನ್ನವಾದ ಬಿಳಿಬಣ್ಣದ ಹೂಗಳು, ಅವನು ಈ ಸಸಿಗಳನ್ನು ಎಚ್ಚರಿಕೆಯಿಂದ ಅಗೆದು ತೆಗೆದು ಬುಟ್ಟಿಯಲ್ಲಿಟ್ಟು ಅವುಗಳ ಬೇರುಗಳಿಗೆ ಮಣ್ಣು ಒತ್ತಿದ, ತೊರೆಯಿಂದ ಬೊಗಸೆಯಲ್ಲಿ ನೀರನ್ನೆತ್ತಿ ಅವಕ್ಕೆ ಸಿಂಪಡಿಸಿದ. ಬುಟ್ಟಿಯಲ್ಲಿ ನೋಡಿ ಎಲ್ಲ ಸರಿಯಾಗಿದೆಯೆಂದು ಖಚಿತಪಡಿಸಿಕೊಂಡ. ಸಸಿಗಳು ಮೊದಲು ತನ್ನ ಕಣ್ಣಿಗೆ ಬಿದ್ದಾಗಿನಷ್ಟೆ ಹೊಸತನದಿಂದ ಕಂಗೊಳಿಸುತ್ತಿದ್ದುವು. ಇಂದು ತಾನು ತಂದ ಹೂಗಳ ಬಗ್ಗೆ ಹೆಮ್ಮೆ ಪಡಬಹುದಾಗಿತ್ತು.

ಮರ್ಕಿನಮ್ಮ ನಿಜವಾಗಿ ಸಂತೋಷಪಟ್ಟಳು. "ಒಳ್ಳೇ ಕೆಲಸ ಮಾಡಿದೆ.

ರಾಮನ್. ಹೇಳಿದ್ದನ್ನ ಚಾಚು ತಪ್ಪದೆ ಪಾಲಿಸಿದೆ" ಎಂದಳು. ಬುಟ್ಟಿಯನ್ನು ತನ್ನ ಕುರ್ಚಿಯ ಪಕ್ಕದಲ್ಲಿ ಇಟ್ಟು ತನ್ನ ನಿಲುವಂಗಿಯ ಜೇಬಿನಿಂದ ಹಣದ ಸಣ್ಣ ಚೀಲವನ್ನೆತ್ತಿ ಬಿಚ್ಚಿದಳು. ಇಲ್ಲಿ ಬಾ ರಾಮನ್ ಎಂದು ಕರೆದಳು ರಾಮನ್ ಬಂದ. ಮರ್ಕಿನಮ್ಮ ಒಂದು ಕೈ ಮುಂಚಾಚಿದಳು. ತನ್ನ ಎರಡೂ ಕೈಗಳನ್ನು ಬೊಗಸೆಯಂತೆ ಜೋಡಿಸಿ ಮುಂದೆ ಮಾಡಿದ. ಇನ್ನೊಬ್ಬರಿಂದ ಏನನ್ನಾದರೂ ನಮ್ರತೆಯಿಂದ ಸ್ವೀಕರಿಸುವ ರೀತಿ ಇದೇ ಅಲ್ಲವೆ ? ಮರ್ಕಿ ನಮ್ಮ 25 ನಯಾಪೈಸೆಯ ನಾಲ್ಕು ನಾಣ್ಯಗಳನ್ನು ಅವನ ಕೈಗೆ ಹಾಕಿದಳು. ಪ್ರತಿಯೊಂದು ಸಸಿಗೆ ಇಪ್ಪತ್ತೈದು ನಯೆಪೈಸೆ, ಒಟ್ಟು ಒಂದು ರೂಪಾಯಿ. ಒಂದು ಇಡೀ ರೂಪಾಯಿ ! ಸಂತೋಷ ಉಕ್ಕಿ ಬಂದು ರಾಮನ್ ಕಣ್ಣರಳಿಸಿದ.

ಮರ್ಕಿನಮ್ಮ ನಕ್ಕು, 'ನಿನಗೆ ಆದಾಗಲೆಲ್ಲ ಹೂಗಳನ್ನು ತಗೊಂಡು ಬಾ ರಾಮನ್. ಅದರೆ ಪ್ರತಿ ಸಸಿಯೂ ಹೊಸ ಜಾತಿಯದಾಗಿರಬೇಕು; ನೀನು ಹಿಂದೆ ತಂದಂಥಾದ್ದು ಆಗಿರಕೂಡದು. ಇದನ್ನ ಗಮನದಲ್ಲಿಟ್ಟುಕೊ. ಪ್ರತಿ ಹೊಸ ಸಸಿಗೂ ನಿನಗೆ ಇಪ್ಪತ್ತೈದು ನಯೆಪೈಸೆ ಸರಿಯೇ ?' ಎಂದು ಕೇಳಿದಳು.

"ಹಾಗೇ ಆಗಲಿ" ಎಂದು ರಾಮನ್ ಹಲ್ಲು ಬಿಟ್ಟ.

"ಈಗಲೇ ಕೆಲಸ ಸುರು ಮಾಡ್ತೀನಿ. ಇನ್ನೂ ಬೆಳಕಿದೆ" ಎನ್ನುತ್ತ ಮರ್ಕಿ ನಮ್ಮ ತನ್ನಷ್ಟಕ್ಕೆ ತಾನೇ ಇಂಗ್ಲಿಷ್‌ನಲ್ಲಿ ಗೊಣಗಿಕೊಂಡಳು. ರಾಮನ್ ಕಾದಿದ್ದ. ಆಕೆ ಅಂದಿದ್ದು ಅವನಿಗೆ ಅರ್ಥವಾಗದಿದ್ದರೂ ಭಾವ ಗ್ರಹಿಸಿದ ; ತನ್ನನ್ನು ಇನ್ನೂ ಹೋಗೆಂದಿಲ್ಲವೆಂದುಕೊಂಡ. ಆಕೆ, ತಮಿಳಿನಲ್ಲಿ, 'ರಾಮನ್. ನೀನು ಹೋಗುವ ಮೊದಲು ಮನೆ ಒಳಗೆ ಹೋಗಿ ಕೊಠಡಿಯ ಆ ಕಡೆ ಮೇಜಿನ ಮೇಲಿರೋ ಪೆಟ್ಟಿಗೆ ತಂದು ಕೊಡುವೆಯಾ ?' ಎಂದಳು.

'ಪೆಟ್ಟಿಗೇನಾ, ಅಮ್ಮ ?'

'ಹೂ, ದೊಡ್ಡ ಚಪ್ಪಟೆ ಪೆಟ್ಟಿಗೆ' ಎಂದು ಹೇಳಿ ಅದರ ಗಾತ್ರವನ್ನು ಕೈಯಲ್ಲಿ ತೋರಿಸಿದಳು.

ರಾಮನ್ ತಲೆಯಾಡಿಸಿ ಮನೆಯೊಳಕ್ಕೆ ನಡೆದ. ಮರ್ಕಿನ್ ಬಂಗಲೆಯೊಳಗೆ ಅವನು ಹೋದುದು ಇದೇ ಮೊದಲು. ದೊಡ್ಡ ಕೊಠಡಿ, ತೆರೆದ ಹಲವಾರು ಕಿಟಕಿಗಳು; ಅವುಗಳಿಂದ ಹೊರಗಿನ ಬಯಲು ಪ್ರದೇಶ ಕಾಣುತ್ತಿದೆ. ಆರಾಮ

ಕುರ್ಚಿಗಳು, ಸೋಫಾ, ಮೇಜು, ಅದರ ಸುತ್ತ ತೋಳಿಲ್ಲದ ಕುರ್ಚಿಗಳು ಅಲ್ಲಿದ್ದುವು. ರಾಮನ್‌ನ ಮನೆಯಲ್ಲಿದ್ದುದೆಲ್ಲ ತಾಳೆಎಲೆಯ ಚಾಪೆಗಳು; ಮನೆಯವರು ರಾತ್ರಿ ಅವುಗಳ ಮೇಲೆ ಮಲಗಿದ್ದು ಬೆಳಿಗ್ಗೆ ಒಂದು ಬದಿಯಲ್ಲಿ ಸುರುಳಿ ಸುತ್ತಿಡುತ್ತಿದ್ದರು. ದಪ್ಪಮೆತ್ತೆಯ ಕುರ್ಚಿಯಲ್ಲಿ ಕುಳಿತರೆ ಹೇಗಿರುತ್ತೆಂದು ಊಹಿಸಲು ಯತ್ನಿಸಿದ; ನಿಜವಾಗಿ ಪರಮಾನಂದವಾಗಿರಬೇಕು.

ಕೊಠಡಿಯ ಒಂದು ಕೊನೆಯಲ್ಲಿ ದೊಡ್ಡದಾದ ಕಲ್ಲಿನ ಒಲೆಯಿತ್ತು. ಆದರೆ ರಾಮನ್‌ನ ಗಮನವನ್ನು ಅತ್ತಕಡೆ ಸೆಳೆದುದು ಅವಲ್ಲ-ಅವರ ಎರಡೂ ಕಡೆ ಗೋಡೆಯುದ್ದಕ್ಕೂ ಸಾಲಾಗಿಟ್ಟಿದ್ದ ಬಡುಗಳು: ಒಂದರ ಮೇಲೊಂದು ಬಡು,ಅದರ ತುಂಬ ಪುಸ್ತಕಗಳು. ಬೇರೆ ಬೇರೆ ಆಕಾರ, ಗಾತ್ರಗಳ ಪುಸ್ತಕಗಳು; ರಾಮನ್ ಓದುತ್ತಿದ್ದಂಥ ಕಾಗದದ ಹೊದಿಕೆಯ ಹೊತ್ತಿಗೆಗಳಲ್ಲ; ಅಚ್ಚಸೆಯ ಹೊಳೆಯುವ ಬಣ್ಣಗಳ ದಪ್ಪನೆಯ ಹೊದಿಕೆಯ ಪುಸ್ತಕಗಳು. ತಾನು ಬಂದ ಕೆಲಸ ಮರೆತು ರಾಮನ್ ನಿಧಾನವಾಗಿ ಪುಸ್ತಕಗಳ ಬಡುಗಳತ್ತ ನಡೆದ-ಅವನ್ನೇ ದಿಟ್ಟಿಸುತ್ತ. ಇಂಥ ಪುಸ್ತಕಗಳೆಲ್ಲ ನನ್ನದೇ ಆಗಿದ್ದರೆ. ಅವನ್ನು ಓದುವಂತಿದ್ದರೆ! ಹೇಗಿರಬೇಕು ಆಗ ?

'ಒಂದಲ್ಲ ಒಂದುದಿನ ನಾನು ಇಂಥಪುಸ್ತಕಗಳನ್ನು ಇಟ್ಟುಕೊಳ್ಳುತ್ತೇನೆ!" ಎಂದು ದಿಗ್ಭ್ರಾಂತನಾಗಿದ್ದ ರಾಮನ್ ತನಗೆ ತಾನೇ ಹೇಳಿಕೊಂಡ. ಪುಸ್ತಕ ವ್ಯಾಪಾರಿ ತಂಬುಸ್ವಾಮಿ ಮಾರುವ ಆ ಅಗ್ಗದ ಕಾಗದದ ಹೊದಿಕೆಯ ಹೊತ್ತಗೆಗಳನ್ನು ಕುರಿತು ಯಾವ ಪಂಡಿತರು ತಾನೇ ತಲೆಕೆಡಿಸಿಕೊಳ್ಳುತ್ತಾರೆ? ಅವನ್ನು ಪುಸ್ತಕ ಎಂದು ಕರೆಯುವುದೇ ಕಷ್ಟ.

'ಪೆಟ್ಟಿಗೆ ಸಿಕ್ಕಿತಾ ರಾಮನ್ ?' ಎಂದು ಮರ್ಕಿನಮ್ಮ ಕರೆದಾಗ ರಾಮನ್ ಥಟ್ಟನೆ ಎಚ್ಚೆತ್ತು ತಾನು ಬಂದಕೆಲಸ ಜ್ಞಾಪಿಸಿಕೊಂಡ. ಕಿಟಕಿ ಪಕ್ಕದಲ್ಲಿ ಮೇಜಿನ ಮೇಲಿರುವ ಪೆಟ್ಟಿಗೆ ತಾನೇ ? ಅವಸರವಸರವಾಗಿ ಅಲ್ಲಿಗೆ ನಡೆದು ಹುಷಾರಾಗಿ ಎರಡು ಕೈಗಳಲ್ಲೂ ಪೆಟ್ಟಿಗೆಯನ್ನು ಹಿಡಿದುಕೊಂಡು ಕೊಠಡಿಯ ಬಾಗಿಲತ್ತ ಹೊರಟಾಗ ಮುಖ ತಿರುಗಿಸಿ ಮತ್ತೊಮ್ಮೆ ಆ ಅಗಾಧವಾದ ಪುಸ್ತಕಗಳ ಸಾಲನ್ನು ನೋಡಿ ಹೊರಬಿದ್ದ.

ಅವನ ಕೈಯಿಂದ ಪೆಟ್ಟಿಗೆ ಪಡೆದು ತನ್ನ ತೊಡೆಯ ಮೇಲೆ ಇಟ್ಟುಕೊಳ್ಳುತ್ತ ಮರ್ಕಿನಮ್ಮ 'ಅದೋ ! ಈಗ ಅಲ್ಲಿರೋ ಮೇಜನ್ನ ತರೋದಕ್ಕಾ

ಗುತ್ತ ನೋಡು ರಾಮನ್' ಎಂದು ವರಾಂಡದ ಆಕಡೆಯ ಗೋಡೆಯಂಚಿಗಿದ್ದ ಮೇಜನ್ನು ತೋರಿಸುತ್ತ ಕೇಳಿದಳು. ಅದು ಎತ್ತಲು ಭಾರವಾಗಿತ್ತು, ಎಳೆದು ತಂದು ಚಕ್ರಗಳಿದ್ದ ಕುರ್ಚಿಯ ಬಳಿ ನಿಲ್ಲಿಸಿದ. ಹಿಂದಕ್ಕೆ ಸರಿದು ಮೌನವಾಗಿ ಮರ್ಕಿನಮ್ಮ ಪೆಟ್ಟಿಗೆ ತೆರೆಯುವುದನ್ನೇ ನೋಡುತ್ತ ನಿಂತ. ಅದರೊಳಗಿಂದ ಕೆಲವು ಪುಟ್ಟ ಉದ್ದನೆ ಕುಂಚಗಳನ್ನೂ ಬಣ್ಣದ ಚೀಟಿಗಳು ಅಂಟಿಸಿದ್ದ ಕೆಲವು ಲೋಹದ ಕೊಳವೆಗಳನ್ನೂ ಆಕೆ ಹೊರ ತೆಗೆದಳು. ಕತ್ತೆತ್ತಿ ನೋಡಿ ರಾಮನ್‌ನ ಕುತೂಹಲವನ್ನು ಗಮನಿಸಿ ನಕ್ಕು, 'ಇನ್ನೊಂದೇ ಕೆಲಸ. ರಾಮನ್ ನನಗೆ ಒಂದು ತಟ್ಟೆ, ಒಂದು ಲೋಟಾ ನೀರುಬೇಕು. ಸುಂದರಂ ಇಲ್ಲ. ನೀನೇ ಹುಡುಕಿ ಕೊಂಡು ತರಬೇಕು' ಎಂದಳು,

ಅದೆಷ್ಟರ ಕೆಲಸ ! ರಾಮನ್ ಒಂದು ಕ್ಷಣದಲ್ಲೇ ಅವನ್ನು ತಂದ. ಮರ್ಕಿ ನಮ್ಮ ಬುಟ್ಟಿಯಿಂದ ಒಂದು ಹೂವಿನ ಗಿಡ ತೆಗೆದು ಬುಡದ ಮಣ್ಣು ಅದುಮಿ ಮೇಜಿನ ಮೇಲೆ ಅದನ್ನು ನೆಟ್ಟಗೆ ನಿಲ್ಲಿಸಿದಳು, ಪೆಟ್ಟಿಗೆಯಡಿ ಇದ್ದ ಒಂದು ಸಣ್ಣ ಹಲಗೆಯನ್ನು ಮೇಜಿನ ಮೇಲಿಟ್ಟಳು; ಅದಕ್ಕೆ ಬಿಳಿಯ ಕಾಗದ ಅಂಟಿಸಿ ದಳು. ರಾಮನ್‌ನ ಕೈಯಿಂದ ತಟ್ಟೆ, ಲೋಟ, ತೆಗೆದುಕೊಂಡು, ಮರ್ಕಿ ನಮ್ಮ ಅವನ್ನು ಮೇಜಿನ ಮೇಲಿಟ್ಟು ಒಂದು ಲೋಹದ ಕೊಳವೆಯ ಮುಚ್ಚಳ ತೆರೆದು ಅದುಮಿದಳು; ಆಗ ಅದರಿಂದ ತೆಳ್ಳನೆಯ ಹಸಿರು ಬಣ್ಣದ ದ್ರವ ಹೊರಹೊಮ್ಮಿತು. ಹಾಗೆಯೇ ಇನ್ನೊಂದು ಕೊಳವೆಯಿಂದ ಸ್ವಲ್ಪ ನೀಲಿ, ಇನ್ನೊಂದರಿಂದ ಬೂದು, ಮತ್ತೊಂದರಿಂದ ಹಳದಿ ಬಣ್ಣಗಳನ್ನು ತೆಗೆದು ಕೆಲಸವಾರಂಭಿಸಿದಳು. ಸ್ವಲ್ಪ ಕಲಸಿದೊಡನೆ ಅಚ್ಚ ಬೂದು ಬಣ್ಣ ಹೋಗಿ ಗಿಡದ ಎಲೆಗಳ ಬಣ್ಣದ ತಿಳಿ ಹಸಿರು ಬಣ್ಣ ಮೂಡಿತು. ಹೊಸದಾಗಿ ಕಲ ಸಿದ ಈ ಬಣ್ಣದಲ್ಲಿ ಕುಂಚವನ್ನು ಅದ್ದಿ ಹಲಗೆಗೆ ಅಂಟಿಸಿದ್ದ ಕಾಗದದ ಮೇಲೆ ಬರೆಯಲಾರಂಭಿಸಿದಳು.

ನೋಡುತ, ನೋಡುತ್ತ ರಾಮನ್ ಆಶ್ಚರ್ಯಚಕಿತನಾದ ! ಕಾಗದದ ಮೇಲೆ ಹೂವಿನ ಚಿತ್ರವೊಂದು ರೂಪುಗೊಳ್ಳಲಾರಂಭಿಸಿದೆ ! ತಾನು ತಂದು ಕೊಟ್ಟ ಬಳ್ಳಿಗಿದ್ದ ಹೂವಿನ ತದ್ರೂಪ! ಹಾಗೇ ನಿಂತುನೋಡಿದ. ಚಿತ್ರ ಬರೆಯು ವುದು ಮುಗಿಯುವವರೆಗೆ; ಹೂಗಳ ಸೂಕ್ಷ್ಮ ವಿಷಯಗಳು ಕೂಡಾ ಚಿತ್ರದಲ್ಲಿ ಮೂಡಿ ಬಂದಿವೆ ! ಕೊನೆಗೆ ಮರ್ಕಿನಮ್ಮ ಕುಂಚಗಳನ್ನು ಮೇಜಿನ ಮೇಲಿಟ್ಟು

ಹಿಂದಕ್ಕೆ ಒರಗಿ ಕುಳಿತು ರಾಮನ್‌ನನ್ನು ನೋಡಿದಳು.

'ಈಗ ಗೊತ್ತಾಯಿತಾ ನಾನು ಬೆಟ್ಟದ ಹೂಗಳು ಬೇಕೆಂದು ಕೇಳಿದ್ದೇಕೇಂತ ? ಅವು ಬಾಡದೆ ಹಚ್ಚಗಿರಬೇಕೆಂದೂ ಹೇಳಿದ್ದೇಕೆ ಅಂತ ತಿಳಿಯಿತಾ ?' ಎಂದು ನಗುತ್ತಲೇ ಕೇಳಿದಳು.



ರಾಮನ್ ತಲೆದೂಗಿದ; 'ತುಂಬಾ ಚನ್ನಾಗಿದೆ ಅಮ್ಮ ಅದು' ಎಂದ.

'ಒಳ್ಳೇದು, ಥ್ಯಾಂಕ್ಯೂ. ನಿನ್ನ ಸಹಾಯದಿಂದ ನಾನು ಇಂಥ ಇನ್ನೂ ಹಲವನ್ನು ಬರೆಯಬೇಕೂಂತಿದ್ದೀನಿ. ಈಗ ಬೆಳಕು ಸಾಕಷ್ಟಿಲ್ಲ, ಹೆಚ್ಚು ಕೆಲಸ ಮಾಡಕ್ಕಾಗಲ್ಲ. ಬಳ್ಳಿಗಳು ನಾಳೆ ಬೆಳಗಿನವರೆಗೂ ಬಾಡದೆ ಹೀಗೇ ಉಳಿಯುತ್ತವೆಂದು ಆಶಿಸ್ತೇನೆ'

'ಅವಕ್ಕೆ ಇನ್ನಷ್ಟು ನೀರು ಹಾಕುತ್ತೀನಮ್ಮಾ !'ಎಂದು ರಾಮನ್ ಕೂಡಲೇ ಹೇಳಿದ.

'ಹಾಂ ಒಳ್ಳೇ ಯೋಚನೆ ಅದು ರಾಮನ್' ಎಂದಳು ಆಕೆ. ಬುಟ್ಟಿಯನ್ನು ಕಾಂಪೌಂಡ್‌ನಲ್ಲಿ ನಲ್ಲಿಯ ಬಳಿಗೊಯ್ದು ಸಸಿಗಳ ಮೇಲೆ ನೀರು ಸಿಂಪಡಿಸುವುದು ಎಷ್ಟೊತ್ತಿನ ಕೆಲಸ. ರಾಮನ್ ಅದನ್ನು ಮುಗಿಸಿ ಬಂದಾಗ ಮರ್ಕಿನಮ್ಮ ಕುಂಚಗಳನ್ನು ಬಣ್ಣಗಳನ್ನೂ ತೆಗೆದಿಡುತ್ತಿದ್ದಳು ಮೇಜಿನ ಮೇಲಿನ

ಸಾಮಾನುಗಳನ್ನು ಆಕೆ ತೆಗೆದಿರಿಸಿದಾಕ್ಷಣ ರಾಮನ್ ಧಾವಿಸಿದ ಮೇಜನ್ನು ಮೊದಲಿದ್ದ ಸ್ಥಳದಲ್ಲಿಡಲು. ಮರ್ಕಿನಮ್ಮ, 'ಈ ಬುಟ್ಟಿ ಹೀಗೇ ಇರಲಿ; ಅಡಿಗೆ ಮನೆಯ ಹಿಂದುಗಡೆ ಬೇರೆ ಬುಟ್ಟಿ ಇದೆ; ಅದನ್ನು ತೆಗೆದುಕೊಂಡು ಹೋಗು; ನಿನ್ನ ಸಹಾಯಕ್ಕೆ ವಂದನೆ. ನೀನಿನ್ನು ಹೋಗಬಹುದು' ಎಂದಳು.

'ನಮಸ್ಕಾರ ಅಮ್ಮ, ಹೋಗಿ ಬರ್ತೀನಿ' ಎಂದು ರಾಮನ್ ತಮಿಳಿನಲ್ಲಿ ಬೀಳ್ಕೊಡುವ ಸಂಪ್ರದಾಯದಂತೆ ಹೇಳಿ ಹೊರಟ. ಮುಂಚಿನ ಬುಟ್ಟಿಯಲ್ಲಿ ಸಸಿಗಳನ್ನು ಹಾಗೇ ಇಟ್ಟಿದ್ದರಿಂದ ಬೇರೊಂದು ಬುಟ್ಟಿಯನ್ನು ಹುಡುಕಿ ತೆಗೆದು ಕೊಂಡು ರಸ್ತೆಯತ್ತ ಸರಸರನೆ ನಡೆದು ಹೋದ. ಆಗಲೆ ಮುಚ್ಚಂಜೆಯಾ ಗಿತ್ತು. ತಾನು ಇನ್ನೂ ಏಕೆ ಬರಲಿಲ್ಲವೋ ಅಂದುಕೊಂಡು ತಾಯಿ ಚಿಂತಿಸು ತ್ತಿರಬಹುದು. ಆದರೆ ಹಣವನ್ನು ಕೈಗಿತ್ತಾಗ ಆಕೆಯ ಆಶ್ಚರ್ಯವನ್ನು ಊಹಿ ಸಿಕೊಂಡ. ಈದಿನ ಅವನು ಗಳಿಸಿದ್ದು ಒಂದು ರೂಪಾಯಿ, ಐವತ್ತು ನಯೆ ಪೈಸೇ. ಹಿಂದೆಂದೂ ಅಷ್ಟೊಂದು ಬಂದಿರಲಿಲ್ಲ. ಅದಕ್ಕೂ ಹೆಚ್ಚಿನದೆಂದರೆ ತನಗೆ ಒಂದು ನಯೆಂಪೈಸೆ ಸಿಗುವುದು. ಮನೆಯಲ್ಲಿ ಸಡಿಲವಾದ ಇಟ್ಟಿಗೆಯ ಹಿಂದಿಟ್ಟಿದ್ದ ತನ್ನ ಸಂಗ್ರಹಕ್ಕೆ ಸೇರುವುದು. ಈಗಾಗಲೆ ಅಲ್ಲಿ, ಹನ್ನೊಂದು ಪೈಸೇಇದೆ, ಈಗ ಅದು ಹನ್ನೆರಡಾಗುವುದು. ಅರ್ಧರೂಪಾಯಿ ಹೆಚ್ಚಿಗೆ ಸಂಪಾ ದಿಸಿರುವುದಕ್ಕೆ ಗೋಡೆಯ ಮೇಲೆ ಒಂದು ಗುರುತು ಹಾಕುವುದು; ಮುಂದಿನ ಸಲ ಅರ್ಧ ರೂಪಾಯಿ ಗಳಿಸಿದಾಗ ಇವೆರಡೂ ಕೂಡಿ ಆಗಲೂ ತನ್ನದೇ ಆದ ಒಂದು ನಯೆಪೈಸೆ ಉಳಿಯುವುದು.

ರಾಮನ್ ಓಡಲಾರಂಭಿಸಿದ. ಓಡುವಾಗ ಅಂಗಿಯಂಚಿನಲ್ಲಿ ಕಟ್ಟಿದ್ದ ನಾಣ್ಯಗಳು ಮೈಗೆ ತಾಕಲಾಡಿ ಶಬ್ದಮಾಡುತ್ತಿದ್ದವು. ಒಂದು ರೂಪಾಯಿ, ಐವತ್ತು ನಯೆಪೈಸೇ ! ಇನ್ನೂ ಇದೇ ರೀತಿ ಹಣ ದೊರೆಯುವ ಭರವಸೆ ಬೇರೆ ಇದೆಯಲ್ಲಾ !,

ಮನೆಯಲ್ಲಿ ರಾತ್ರಿ ಊಟಕ್ಕೆ ಅನ್ನ, ಮೆಣಸಿನ ಸಾರು ಇದ್ದವು. ಊಟ ಮಾಡುವಾಗ್ಗೆ ರಾಮನ್ ತನ್ನ ಎಂದಿನ ಮೌನ ಮುಮುರಿದು ಮರ್ಕಿನಮ್ಮ, ಹೂಗಳು. ನಿಜವಾಗಿ ಬೆಳೆಯುತ್ತಿವೆಯೋ ಎಂಬಂತಿದ್ದ ಆಕೆ ಚಿತ್ರಿಸಿದ್ದ ಹೂಗಳು—ಇವೆಲ್ಲ ವಿಷಯವನ್ನು ತಾಯಿಗೆ ಹೇಳಿದ.

ತಾಯಿ ಮೌನವಾಗಿ ಎಲ್ಲವನ್ನು ಕೇಳಿದಳು. ಹೆಚ್ಚಿಗೆ ದುಡ್ಡು ಸಂಪಾದಿಸಿ

ದುದರಿಂದ ಅವಳಿಗೆ ಸಂತೋಷವೇನೋ ಆಗಿತ್ತು. ಆದರೆ ರಾಮನ್ ನಿರೀಕ್ಷಿಸಿದ್ದಷ್ಟು ಆಕೆ ಆಶ್ಚರ್ಯಗೊಳ್ಳಲಿಲ್ಲ. ಆಕೆ ತಲೆ ಅಲ್ಲಾಡಿಸಿ ಅರಳಿದ ಕಾಡು ಹೂಗಳಿಗೆ, ಅದೂ ಅವುಗಳ ಚಿತ್ರ ಬರೆಯಲು ಮರ್ಕಿನಮ್ಮ ಏಕೆ ಹಣ ಕೊಡುತ್ತಾಳೆ ಅಂದುಕೊಂಡಳು.

'ಆದರೆ ಆಕೆ ಹಾಗೆ ಮಾಡುವುದು ನಮ್ಮ ಅದೃಷ್ಟ. ನಮಗೆ ತುಂಬಾ ಸಹಾಯವಾಗುತ್ತದೆ' ಎಂದಳು ಆಕೆ. ರಾಮನ್‌ನ ನಿರಾಶೆಯನ್ನು ಗಮನಿಸುತ್ತ.

ಅಮ್ಮ ಇನ್ನಷ್ಟು ಆಶ್ಚರ್ಯಗೊಳ್ಳಬಾರದಿತ್ತೇ ಅಂದುಕೊಂಡ ರಾಮನ್. ತಲೆ ಅಲ್ಲಾಡಿಸುತ್ತ ಆಕೆ ಎಂದಿಗಿಂತ ಹೆಚ್ಚು ಮೌನದಿಂದಿದ್ದಳು. ಯೋಚನೆಯಿರಬೇಕು ಅಂದುಕೊಂಡ. ಈಗಾಗಲೆ ಮೂರು ವಾರ ಕಳೆದಿತ್ತು. ತಂದೆಯಿಂದ ಸುದ್ದಿಯೇ ಇಲ್ಲ.

ವೇಳೆ ಬಹು ನಿಧಾನವಾಗಿ ಕಳೆಯುತ್ತಿದ್ದಂತೆ ರಾಮನ್‌ಗೆ ಭಾಸವಾಯಿತು. ಚಿಕ್ಕ ಮಕ್ಕಳು ಮಲಗೋದೇ ಇಲ್ಲವೆ ? ವಾಸಂತಿಯ ಹೊದಿಕೆ ಮತ್ತೆ ಹರಿದು ಹೋಗಿ ಅವಳು ಅಳುತ್ತಿದ್ದಳು; ತಾನು ಹೊಲಿದಾಗೆಲ್ಲ ಅದು ಹರಿದುಹೋಗುತ್ತಲೇ ಇತ್ತು. ಕೊನೆಗೆ ತಾಯಿಯೇ ಹರಿದ ಭಾಗವನ್ನು ಹೊಲೆದಿದ್ದಳು.

ಆಮೇಲೆ ವಾಸಂತಿ, ದಾಸನ್ ಮಲಗಿದರು; ಅದಾದಮೇಲೆ ತಾಯಿ ಆಗಲೆ ನಿದ್ರಿಸಿದ್ದ ಮಗುವಿನ ಪಕ್ಕದಲ್ಲಿ ಮಲಗಿದಳು. ಕೊಠಡಿಯ ಇನ್ನೊಂದು ಕೊನೆಯಲ್ಲಿ ರಾಮನ್ ಚಾಪೆ ಹಾಸಿ. ಬೇರೆಯವರೆಲ್ಲರೂ ನಿದ್ರೆ ಹೋದರೇ ಎಂದು ಅವರುಗಳ ಉಸಿರಾಟ ಆಲಿಸುತ್ತ ಕುಳಿತ. ಆಮೇಲೆ ಎದ್ದು ಮೆಲ್ಲನೆ ಗೋಡೆಯಂಚಿನಲ್ಲೇ ನಡೆದು ಸಡಿಲವಾದ ಇಟ್ಟಿಗೆಯಿದ್ದ ಜಾಗವನ್ನರಸಿದ. ಇಟ್ಟಿಗೆ ಹೊರತೆಗೆದು ಅದರ ಹಿಂದೆ ತಾನಿಟ್ಟಿದ್ದ ಹಣದ ಗಂಟಿಗಾಗಿ ಕೈಯಾಡಿಸಿದ. ಗಂಟಿನ ಬಟ್ಟೆಯೇನೋ ಇತ್ತು. ಆದರೆ ಅದು ತುಂಬಾ ಹಗುರವಾಗಿತ್ತು. ಖಾಲಿ ! ಆದರೆ ಅದು ಸಾಧ್ಯವಿಲ್ಲವಲ್ಲಾ !

ರಾಮನ್ ಕತ್ತಲೆಯಲ್ಲಿ ನೆಟ್ಟಗೆ ಎದ್ದು ಕುಳಿತ. ಬಟ್ಟೆ ಖಾಲಿಯಾಗಿದ್ದರ ಬಗ್ಗೆ ಏನೂ ಸಂಶಯವಿರಲಿಲ್ಲ. ನಾಣ್ಯಗಳೇನಾದರೂ ಬಿದ್ದು ಹೋಗಿವೆಯೇ ಎಂದು ಉದ್ವಿಗ್ನತೆಯಿಂದ ಕೈಯಾಡಿಸಿದ. ಕೈಗೆ ಸಿಕ್ಕಿದ್ದು ಧೂಳು ಮಾತ್ರ. ತನ್ನ ತಾಳೆಗರಿ ಚಾಪೆಯ ಅಂಚನ್ನು ಎತ್ತಿ ಒರಟಾದ ಕೊಳೆ ನೆಲದಲ್ಲಿ ತಡಕಿದ ಮತ್ತೆ ಗೋಡೆಯ ಗೂಡಿನಲ್ಲಿ ಕೈಹಾಕಿದ: ಏನೂ ಉಪಯೋಗವಾಗಲಿಲ್ಲ. ಹಣ

ಕಣ್ಮರೆಯಾಗಿತ್ತು.

ದಿಙ್ಮೂಢನಾದ ರಾಮುನ್ ಇಟ್ಟಿಗೆಯನ್ನು ಮೊದಲಿದ್ದ ಜಾಗಕ್ಕೇ ಸರಿಸಿದ. ಹಣ ಎಲ್ಲಿಗೆ ಹೋಗಿರತ್ತೆ? ವಾಸಂತಿ........? ಎಂದಿಗೂ ಅವಳಲ್ಲ. ಹಾಗಾದರೆ ಇನ್ನು ಯಾರು? ಅವಿತಿಟ್ಟಿದ್ದ ಸ್ಥಳ ಯಾರಿಗೂ ಗೊತ್ತಿಲ್ಲವೆಂದು ಅವನಿಗೆ ಖಚಿತವಾಗಿತ್ತು. ಆದರೆ ನಿದ್ರೆ ಮಾಡುತ್ತಿದ್ದಳೆಂದು ಭಾವಿಸಿದ್ದಾಗ ವಾಸಂತಿ ಬಹುಶಃ ತನ್ನನ್ನು ಇಲ್ಲಿ ನೋಡುತ್ತಿದ್ದಳೇನೋ? ದಾಸನ್ ಇನ್ನೂ ಸಣ್ಣವನು.

ಈಗ ಯಾರನ್ನೂ ಎಚ್ಚರಿಸಲು ಧೈರ್ಯವಾಗಲಿಲ್ಲ. ಬೆಳಗಿನವರೆಗೂ ಕಾದಿರಬೇಕೆಂದುಕೊಂಡ. ವಾಸಂತಿ ತೆಗೆದಿರಬಹುದೆ ಎಂಬ ಯೋಚನೆ ಮತ್ತೆ ಕಾಡಿತು.

ಏನು ಮಾಡಿಯಾದರೂ ಕಳೆದ ಹಣವನ್ನು ಮತ್ತೆ ಪಡೆಯಲೇಬೇಕು. ಕಣ್ಣಿನಲ್ಲಿ ತುಂಬಿ ಬಂದ ಹನಿಯನ್ನು ತಡೆಯಲು ಯತ್ನಿಸಿದ. ಹಣವನ್ನು ಹುಡುಕಿ ತೆಗೆಯಲೇಬೇಕು ಎಂದು ನಿರ್ಧರಿಸಿದ.

# ೯

ಮಾರನೇ ಬೆಳಿಗ್ಗೆ ರಾಮನ್ ಎಚ್ಚರಗೊಂಡರೂ ಮೇಲುಗಡೆಯಿದ್ದ ಚಾವಣಿ ತೊಲೆಗಳನ್ನು ದಿಟ್ಟಿಸುತ್ತ ಮಲಗಿದ್ದ. ಕ್ಷಣ ಕಾಲ ಏನೂ ಮನಸ್ಸಿಗೆ ಬರಲಿಲ್ಲ. ಆಗ ಹಠಾತ್ತನೆ ಕಾಣುವ ರೀತಿಯಲ್ಲಿ ಅದು ನೆನಪಿಗೆ ಬಂದಿತು. ತನ್ನ ಹಣ.

ಹೊದಿಕೆ ಪಕ್ಕಕ್ಕೆಸೆದು ಎದ್ದು ಕುಳಿತ. ಬೇಗನೆ ಸಡಿಲವಾದ ಆ ಇಟ್ಟಿಗೆ ಹೊರಕ್ಕೆಳೆದು ಮಂಡಿಯೂರಿ ಗುಣಿಯೊಳಕ್ಕೆ ಇಣಕಿ ನೋಡಿ ಹಣ ಅಲ್ಲಿಲ್ಲ ವೆಂದು ಖಾತರಮಾಡಿಕೊಂಡ. ಗುಣಿ ಖಾಲಿಯಾಗಿತ್ತು.

ವಾಸಂತಿ! ಅವನು ನೆಟ್ಟಗೆ ಕುಳಿತು ತನ್ನ ತಂಗಿ ಮಲಗಿದ್ದತ್ತ ನೋಡಿದ. ಅವಳು ಆದೇ ತಾನೆ ಎಚ್ಚರಗೊಳ್ಳುವುದರಲ್ಲಿದ್ದಂತಿತ್ತು. "ವಾಸಂತಿ!" ರಾಮನ್ ಸಣ್ಣ, ಗಡುಸಾದ ದನಿಯಲ್ಲಿ ಕೇಳಿದ. "ವಾಸಂತಿ. ಎಲ್ಲಿ ಅದು? ಅದನ್ನು ನೀನೇನು ಮಾಡಿದೆ?"

ಎಚ್ಚರಗೊಳ್ಳುವ ಪ್ರಯತ್ನದಲ್ಲಿ ಅಗಲವಾಗಿ ಕಣ್ಣು ತೆರೆದು ವಾಸಂತಿ ಅವನತ್ತ ನೋಡಿದಳು,

"ಹಣ, ವಾಸಂತಿ! ನಾನು ಹನ್ನೊಂದು ನಯೇಪೈಸೇ ಇಟ್ಟಿದ್ದೆ. ಅದನ್ನು ತೆಗೆದುಕೊಂಡು ನೀನೇನು ಮಾಡಿದೆ?" ಅವನ ದನಿ ಒಡೆದು ಗಟ್ಟಿಯಾಗಿತ್ತು.

"ನಾನು ದುಡ್ಡೇನನ್ನೂ ನೋಡಲಿಲ್ಲ. ಅಣ್ಣಾ" ಎಂದು ವಾಸಂತಿ ಮಾರುತ್ತರವಿತ್ತಳು.

ಹತಾಶನಾದ ರಾಮನ್‌ಗೆ ಕೋಪ ಬಂತು. "ನೀನೇ ಇರಬೇಕು!" ಅವನು ಆಕ್ರೋಶಿಸಿದ. "ಇನ್ನಾರಿಗೆ ತಾನೇ ಅದು ಗೊತ್ತಿದ್ದೀತು? ಎಲ್ಲಿ ದುಡ್ಡು ವಾಸಂತಿ. ಎಲ್ಲಿ ದುಡ್ಡು?" ಅವನು ಅವಳ ಪಕ್ಕದಲ್ಲಿ ಕುಳಿತು ಅವಳನ್ನು ಹಿಡಿದು ಅಲ್ಲಾಡಿಸುತ್ತ ಕೇಳಿದ. ವಾಸಂತಿ ಅಳಲಾರಂಭಿಸಿದಳು. ನಿದ್ರೆಯಿಂದ

ಎಚ್ಚೆತ್ತ ದಾಸನ್ ಕೂಡಾ ಬೆದರಿ ಇವರನ್ನು ಕೂಡಿಕೊಂಡ.

"ರಾಮನ್," ಮನೆ ಬಾಗಿಲಿಂದ ಅವನ ತಾಯಿಯ ದನಿ ಹೇಳಿತು," "ವಾಸಂತಿ ನಿನ್ನ ದುಡ್ಡು ತೆಗೆದುಕೊಳ್ಳಲಿಲ್ಲ. ಅವಳನ್ನು ಬಿಟ್ಟುಬಿಡು."

ರಾಮನ್ ಹಿಂದಕ್ಕೆ ಕುಳಿತ: ಕೈಗಳೆರಡೂ ಪಕ್ಕಕ್ಕೆ ಇಳಿಬಿದ್ದವು. ಇಬ್ಬರು ಮಕ್ಕಳನ್ನೂ ಎದ್ದು ಹೋಗುವಂತೆ ತಾಯಿ ಸನ್ನೆ ಮಾಡಿದಳು. ವಾಸಂತಿ



ಮೇಲಕ್ಕೆದ್ದು ದಾಸನ್‌ನ ಕೈಹಿಡಿದುಕೊಂಡು ತನ್ನ ಕೈಯ ಹಿಂಭಾಗದಿಂದ ಕಣ್ಣೀರನ್ನು ಒರಸಿಕೊಳ್ಳುತ್ತ ಬಾಗಿಲಿನತ್ತ ಹೊರಟಳು.

"ಹಾಗಾದರೆ ಅವಳೇ ತೆಗೆದುಕೊಂಡಿರಬೇಕು. ಅಮ್ಮ" ಮಕ್ಕಳು ಹೋದ ಮೇಲೆ ರಾಮನ್ ವಾದಿಸಿದ. "ಇನ್ನಾರು ತೆಗೆದುಕೊಳ್ಳುತ್ತಾರೆ?"

"ಅವಳಲ್ಲ ತಗೊಂಡಿದ್ದು, ನಾನು" ಎಂದು ತಾಯಿ ಗಂಭೀರವಾಗಿ ಹೇಳಿದಳು.

ರಾಮನ್ ಚಕಿತನಾದ. "ಅಮ್ಮಾ!" ಒಣಗುತ್ತಿದ್ದ ತನ್ನ ತುಟಿಗಳನ್ನು ನಾಲಗೆಯಿಂದ ಒರಸಿಕೊಳ್ಳುತ್ತ ಹೇಳಿದ." ಅಮ್ಮಾ. ಅದು ನಾನು ಸಂಪಾದಿಸಿ ರುವುದರಿಂದ ಕೂಡಿಟ್ಟ ದುಡ್ಡು! ಪುಸ್ತಕ ಕೊಳ್ಳಲು ಅದನ್ನು ನಾನು ಇಟ್ಟು ಕೊಳ್ಳಬಹುದೂಂತ ಅಪ್ಪ ಹೇಳಿದ್ದ"

"ಅದನ್ನು ನಿನ್ನೆ ಬೆಳಿಗ್ಗೆ ನಾನು ತೆಗೆದುಕೊಂಡೆ"–ತಾಯಿ ಅದೇ ದನಿ ಯಲ್ಲಿ ಮುಂದುವರಿಸಿದಳು. "ನೀನು ಮನೇಲಿರಲಿಲ್ಲ. ಇಲ್ಲದಿದ್ದರೆ ನಾನೇ ನಿನ್ನ ಕೇಳುತ್ತಿದ್ದೆ. ಅಕ್ಕಿ ಕೊಳ್ಳಲು ಹಣ ಸಾಕಾಗಲಿಲ್ಲ, ಅದನ್ನು ನಾನು ತಗೊ ಳ್ಳಲೇಬೇಕಾಯಿತು. ನಿನ್ನೆ ರಾತ್ರಿಯೇ ನಿನಗೆ ಹೇಳಬೇಕೂಂತಿದ್ದೆ. ಆದರೆ ಮರ್ಕಿನಮ್ಮ ಮತ್ತು ಅವಳ ಹೂಗಳ ಬಗ್ಗೆ ನೀನು ತುಂಬಾ ಉದ್ವೇಗಗೊಂ ಡಿದ್ದೆ. ಆದರಿಂದ ಈ ಬೆಳಿಗ್ಗೆ ಹೇಳೋಣವೆಂದು ಸುಮ್ಮನಾದೆ."

"ಆದರೆ ಅದು ನನ್ನದು" ತಾಯಿ ಹೇಳಿದ್ದೆಲ್ಲಾ ಕೇಳಿಸಲೇ ಇಲ್ಲವೋ ಎಂಬಂತೆ ರಾಮನ್ ಪ್ರತಿಪಾದಿಸಿದ, "ಅದು ನನ್ನದು. ಪುಸ್ತಕ ಕೊಳ್ಳಲು ಇದ್ದುದು".

"ಪುಸ್ತಕ ಕೊಳ್ಳೋಕೆ!" ತಾಯಿ ಏರಿದ ದನಿಯಲ್ಲಿ ಹೇಳಿದಳು "ನಮಗೆ ಉಣ್ಣಲು ಸಾಕಾಗದಿರುವಾಗ ನೀನು ಪುಸ್ತಕಗಳನ್ನು ಕೊಳ್ಳಬೇಕು! ಈಗ ಸದ್ಯಕ್ಕೆ ನಮಗೆ ತಿನ್ನಲು ಸಿಗೋದೇ ಕಷ್ಟವಾಗಿರುವಾಗ ಎಷ್ಟೋ ಕಾಲದ ಹಿಂದೆ ಆಗಿ ಹೋದ ವೀರರ ಯುದ್ಧಗಳ ಕಥೆಗಳಿಂದ ನಿನ್ನ ತಲೆ ತುಂಬಿಸಿಕೊಳ್ಳಬೇಕು. ದಿನ ದಿನವೂ ಮುಂದಿನ ಹೊತ್ತಿಗೆ ಅಕ್ಕಿ ಕೊಳ್ಳಲು ಹಣ ಇರುವ ನಂಬಿಕೆಯೇ ಇಲ್ಲ. ಪುಸ್ತಕ. ಪುಸ್ತಕ! ನಮಗೆ ಬೇಕಾದುದು ಯಾವುದು ಹೇಳು ಅನ್ನವೋ. ಪುಸ್ತಕಗಳೋ?" ಅಮ್ಮನನ್ನು ಹೀಗೆ ಎಂದೂ ಕಂಡಿರಲಿಲ್ಲ. ಅವಳ ಕಣ್ಣುಗಳಲ್ಲಿ ನೀರು ತುಂಬಿಕೊಂಡುದನ್ನು ಕಂಡು ಅವನು ದಿಗ್ಭ್ರಾಂತನಾದ. ತಾಯಿ ಅಳುತ್ತಿ ದ್ದಾಳೆ! ಎಂದೂ ಅಳದವಳ ಕಣ್ಣಲ್ಲಿ ನೀರು!

ಅವನ ಕೋಪ ಮಾಯವಾಗಿತ್ತು. "ಅಮ್ಮಾ. ಸುಮ್ಮನಾಗು" ಆಕೆ ನೆಲದ ಮೇಲೆ ಕುಳಿತು ಸೆರಗಿನಿಂದ ಮುಖ ಮುಚ್ಚಿಕೊಂಡಿದ್ದಳು. ಅವಳನ್ನು ಸಮಾ ಧಾನಪಡಿಸಬೇಕು."ಹೋಗಲಿ ಬಿಡಮ್ಮ. ಪುಸ್ತಕಗಳೇನೂ ದೊಡ್ಡ ವಿಷಯವಲ್ಲ. ತಪ್ಪು ನನ್ನದೇ. ಆವೊತ್ತು ಮೊದಲು ಹೂಗಳನ್ನರಸಿ ಹೋದಾಗ ನಾನೇ ಸಾಕಷ್ಟು ಹಣ ತರಲಿಲ್ಲ. ಸುಮ್ಮನಿರಮ್ಮ. ಇನ್ನು ಹಾಗಾಗುವುದಿಲ್ಲ. ನಾನು

ಹೆಚ್ಚಿಗೆ ಸಂಪಾದಿಸುತ್ತೇನೆ."

ಕೊನೆಗೆ ತಾಯಿ ಕತ್ತೆತ್ತಿ ನೋಡಿದಳು, ಕಣ್ಣೀರು ಮಾಯವಾಗಿತ್ತು. "ನಿನ್ನ ತಂದೆಯಿಂದ ಹಣ ಬಂದೊಡನೆ ನಿನ್ನ ದುಡ್ಡು ವಾಪಸು ಪಡೆಯುವೆ ಯಂತೆ. ರಾಮನ್. ಇನ್ನು ಆ ಮಾತಾಡುವುದು ಬೇಡ. ಈಗ ಕೆಲಸ ಬೇಕಾದ ಷ್ಟಿದೆ."

ರಾಮನ್ ನಿಧಾನವಾಗಿ ಎದ್ದ, ಜೋಂಪು ಹಿಡಿದವನಂತೆ. "ನಾ ಹೋಗಿ ಬರುತ್ತೇನಮ್ಮಾ" ಎಂದು ಹೊರಕ್ಕೆ ನಡೆದ.

ಹೆದರಿಕೆ ಕಳೆದು ವಾಸಂತಿಯೂ, ದಾಸನ್‌ನೂ ತೊರೆಯ ಪಕ್ಕದಲ್ಲಿ ಕೆಳ ಗಡೆ ಪರಸ್ಪರರ ಮೇಲೆ ತಣ್ಣೀರೆರಚಾಡುತ್ತ ಕೇಕೆ ಹಾಕುತ್ತ ಆಡುತ್ತಿದ್ದರು. ರಾಮನ್ ಅವರತ್ತ ನೋಡಿದ–ಕಂಡೂ ಕಾಣದಂತೆ. ಥಟ್ಟನೆ ತನ್ನ ತಾಯಿಯ ಹೃದಯದಲ್ಲಡಗಿದ್ದ ಹೆದರಿಕೆಯ ಅರಿವಾಗಿ ಅವನಿಗೆ ವೇದನೆಯಾಯಿತು. ಅಂದು ಬೆಳಿಗ್ಗೆ ಬಸ್ ಸ್ಟಾಂಡಿನಲ್ಲಿ ತಂದೆ ಹೇಳಿದ್ದೇನು?" ನಿನ್ನ ತಾಯಿಯೊ ಡನೆ ಮಾತಾಡಿದ್ದೀನಿ....ಕನಸು ಕಾಣುವುದು ಅಷ್ಟೊಂದು ಮುಖ್ಯವೆಂದು ಪ್ರಾಯಶಃ ಆಕೆ ಅಷ್ಟು ಚೆನ್ನಾಗಿ ಅರಿಯಲಾರಳು...."

ಅಪ್ಪನ ಎಣಿಕೆ ತಪ್ಪು, ತಾಯಿ ಅರಿಯಲಾರಳೆಂದಲ್ಲ. ಆಕೆಗೆ ಹೆದರಿಕೆ ಯಷ್ಟೆ. ಆಕೆಯ ಮುಖ ಗಂಭೀರವಾಗಿ, ತುಟಿಯ ಮೇಲೆ ನಗು ಕಾಣದಾಗಲು ಹೆದರಿಕೆಯೇ ಕಾರಣ. ಹೆದರಿಕೆ, ಕೋಪವಲ್ಲ. ನಮಗೆ ಹಣ ಇರೋಲ್ಲ, ಅಕ್ಕಿ ಇರೋಲ್ಲ, ಅಂತ ಹೆದರಿಕೆ,

ಒಡನೆಯೇ ತಾನು ಹಿರಿಯನಿದ್ದಂತೆ ಭಾಸವಾಯಿತು. ತಾಯಿಯ ಬಗ್ಗೆ ಅವನಲ್ಲಿ ಮೂಡಿಬಂದ ಮರುಕ ಪುಟ್ಟ ಮಗುವೊಂದರ ಬಗ್ಗೆ ಆಗುವಂತಾ ಗಿತ್ತು. ಬಿಸಿಯಾದ ಕಣ್ಣೀರು ಕೂಡಿ ಬರುತ್ತಿತ್ತು. ಗಂಟಲು ಬಿಗಿಯುತ್ತಿದ್ದು ದನ್ನು ಅವನು ಪ್ರಯತ್ನಪಟ್ಟು ತಪ್ಪಿಸಿಕೊಂಡ. ಕಣಿವೆಯಲ್ಲಿ ವಾಸಂತಿ, ದಾಸನ್ ಆಡುತ್ತಿದ್ದುದನ್ನು ನೋಡಿದ. ಅವರ ನಗೆಯಾಟ ಕಂಡು ಅವನಿಗೆ ವೇದನೆಯೆನಿಸಿತು.

ಅವರುಗಳಿಗೆ ಗೊತ್ತಿಲ್ಲ, ಹಣ–ಅಕ್ಕಿ ಮುಂತಾದ ವಿಷಯಗಳೇನೂ ಅವ ರಿಗೆ ಗೊತ್ತೇ ಇಲ್ಲ ಎಂದುಕೊಂಡ ರಾಮನ್. ಹಸಿವಾಗುವುದು ಊಟ ಮಾಡು·

ತ್ತಾರೆ. ಹೆದರಿಕೆಯಾಗುವುದೆಂದರೆ ಏನೆಂಬುದು ಅವರಿಗೆ ತಿಳಿಯದು. ನನಗೂ ಗೊತ್ತಿರದಿದ್ದರೆ ಚೆನ್ನಾಗಿತ್ತು ಎಂದುಕೊಂಡ.

ಇನ್ನೂ ಮೂರು ದಿನ ಕಳೆಯಿತು. ಒಂದು ಮಧ್ಯಾಹ್ನ ರಾಮನ್ ಅಂಗಡಿ ಬೀದಿಯಲ್ಲಿ ಹೋಗುತ್ತಿದ್ದಾಗ ಬಸ್ ಡ್ರೈವರ್ ಮುತ್ತುಸ್ವಾಮಿ ಅವನನ್ನು ಕೂಗಿ ಕರೆದ,

" ಏ, ತಂಬಿ! ನಿನಗೇನೋ ಇದೆ, ಇಗೋ!" ಬಸ್ ಕಚೇರಿಯ ಹೊರಗೆ ಮುತ್ತುಸ್ವಾಮಿ ಇದ್ದಲ್ಲಿಗೆ ರಾಮನ್ ಓಡಿದ. ಬೂದು ಬಣ್ಣದ ಲಕೋಟೆಯೊಂದನ್ನು ಡ್ರೈವರು ರಾಮನ್‌ನ ಕೈಗಿತ್ತ, "ಬಸ್ಸು ನಗರದಿಂದ ಹೊರಡುವುದರಲ್ಲಿದ್ದಾಗ ನಿಮ್ಮ ತಂದೆ ಬಂದು ಇದನ್ನು ಕೊಟ್ಟು ಹೋದ. ಈಗ ಎಲ್ಲವೂ ಚೆನ್ನಾಗಿದೆ. ಆದಷ್ಟು ಬೇಗ ಇನ್ನಷ್ಟು ಕಳಿಸುತ್ತೇನೆ ಎಂದು ನಿನಗೆ ತಿಳಿಸಲು ಹೇಳಿದ."

ರಾಮನ್ ಉಪಕಾರವಾಯಿತೆಂದು ಸಾರಿ ಪೇಟೆಯ ಬೆಟ್ಟದ ರಸ್ತೆಯತ್ತ ಓಡಲಾರಂಭಿಸಿದ. ಲಕೋಟೆಯಲ್ಲಿದ್ದುದು ಏನೆಂದು ಅವನಿಗೆ ಚೆನ್ನಾಗಿ ಗೊತ್ತು. ಇನ್ನು ಅಕ್ಕಿಗೆ ಯೋಚನೆಯಿರುವುದಿಲ್ಲ.

ರಾಮನ್‌ನ ಅಮ್ಮ ಅವನು ಕೊಟ್ಟ ಲಕೋಟೆಯನ್ನು ಕೈಗೆತ್ತಿಕೊಂಡು ಮಾತಾಡದೆ ಅದನ್ನು ತೆರೆದು ಒಳಗಿದ್ದ ನೋಟುಗಳನ್ನು ನೋಡಿದಳು. ರಾಮನ್‌ನ ಕಡೆಗೆ ಕತ್ತೆತ್ತಿ ನೋಡಿ ಒಂದು ನೋಟನ್ನು ಅವನ ಕೈಗಿತ್ತು. "ಪೇಟೆಗೆ ಹೋಗಿ ಅರ್ಧ ಸೇರು ಅಕ್ಕಿ, ಸ್ವಲ್ಪ ತರಕಾರಿ, ಖಾರದ ಸಾಮಾನು ತಗೊಂಡು ಬಾ ರಾಮನ್. ಎಂಥದು ತರಬೇಕೆಂದು ನಿನಗೆ ಗೊತ್ತಲ್ಲಾ" ಎಂದಳು. ರಾಮನ್ ಹಣ ತೆಗೆದುಕೊಂಡು ಹೊರಕ್ಕೆ ಹೋಗಲು ತಿರುಗಿದ. "ಹಾಗೆಯೇ ರಾಮನ್ —"ಅವನು ನಿಂತು ಹಿಂದಿರುಗಿ ನೋಡಿದ, "ಅಂಗಡಿಯವನು ಚಿಲ್ಲರೆ ಕೊಟ್ಟಾಗ ಅದರಲ್ಲಿ ನಿನ್ನ ಹದಿನಾರು ನಯೇ ಪೈಸೆ ತೆಗೆದಿಟ್ಟುಕೋ"

"ಹದಿನಾರೇನಮ್ಮಾ? ಆದರೆ—"

"ಹೌದು. ನನಗೆ ಗೊತ್ತು, ಆ ಹೊತ್ತು ಹನ್ನೊಂದೇ ಇದ್ದುದು. ಆದರೆ ಅಲ್ಲಿಂದೀಚೆಗೆ ನೀನು ಐದು ರೂಪಾಯಿ ಸಂಪಾದಿಸಿದ್ದೀ. ನಿನ್ನ ನಯಾಪೈಸಾ ತೆಗೆದಿಟ್ಟುಕೊಳ್ಳುತ್ತಲೇ, ಇಲ್ಲ"

ಆಕೆಯ ಪ್ರಶಾಂತ ದನಿಯಲ್ಲಿ ಭಾರವೇನೂ ಕಾಣಲಿಲ್ಲ. ರಾಮನ್ ಮಾತಾಡದೆ ನೆಲದತ್ತ ಕಣ್ಣು ಹೊರಳಿಸಿ ನಿಂತ, ಮೂರು ದಿನಗಳ ಹಿಂದಿನ ಆ ನೆನಪು ಬಂದಾಗ ಇನ್ನೂ ನೋವುಳಿದೇ ಇತ್ತು. ಹೊರಗಡೆಯ ಶಾಂತ ಮುದ್ರಿಕೆಯ ಹಿಂದೆ ತಾಯಿ ಅಡಗಿಸಿಟ್ಟಿದ್ದ ಹೆದರಿಕೆ ಮತ್ತೆ ಜ್ಞಾಪಕಕ್ಕೆ ಬಂದಿತು, ತಲೆಯೆತ್ತಿ ಆಕೆಯತ್ತ ನೋಡಿದಾಗ ತಾಯಿ ನಗುತ್ತಿದ್ದುದನ್ನು ಕಂಡ,

"ಇನ್ನು ಹೊರಡು, ಮಗು. ಹೊತ್ತಾಗುತ್ತೆ" ಈಗ ಅವಳ ದನಿಯಲ್ಲಿ ವಾತ್ಸಲ್ಯವಿತ್ತು. ರಾಮನ್‌ಗೆ ಗಂಟಲು ಬಿಗಿದುಕೊಂಡುಬಂದಿತು. ಏನು ಹೇಳಬೇಕೋ ತೋಚಲಿಲ್ಲ,

ಅವನು ಮಾತನಾಡಲು ಬಾಯ್ದೆರೆದ ; ಆದರೆ ಮಾತೇ ಹೊರಡಲಿಲ್ಲ. ನೋಟನ್ನು ಕೈಯಲ್ಲಿ ಭದ್ರವಾಗಿ ಹಿಡಿದುಕೊಂಡು ಅಂಧನಂತೆ ಹೊರಕ್ಕೆ ಓಡಿದ. ರಸ್ತೆಯಲ್ಲೇ ಹೋಗದೆ ಪಕ್ಕದ ಕಟ್ಟೆ ದುಮುಕಿ ಧಾವಿಸಿದ, ಓ, ತನ್ನ ಯೋಚನೆ ತಾಯಿಗೆ ತಿಳಿಯುವಂತಾದರೆ !

ಅಷ್ಟು ದೂರ ನಡೆದವನು ಹಿಂದಿರುಗಿ ಮನೆಯತ್ತ ನೋಡಿದ. ತಾಯಿ ಮನೆಬಾಗಿಲಿಗೆ ಬಂದು ತನ್ನ ಕಡೆ ನೋಡುತ್ತಿದ್ದುದನ್ನು ಕಂಡ. ಅವನು ಕೈ ಬೀಸಿದ ; ಆಕೆಯೂ ಅದಕ್ಕುತ್ತರವಾಗಿ ಕೈಯೆತ್ತಿದ್ದು ಕಾಣಿಸಿತು. ಆಕೆ ಇನ್ನೂ ನಗುತ್ತಿದ್ದಳು,

ಅಕ್ಕಿ, ತರಕಾರಿ, ಖಾರದ ಸಾಮಾನುಗಳ ಗಂಟನ್ನು ಹೆಗಲಮೇಲೆ ತೂಗಿ ಹಾಕಿಕೊಂಡು, ಅಂಗಿಯ ತುದಿಯಲ್ಲಿ ಹದಿನಾರು ಪೈಸಾ ಗಂಟುಹಾಕಿ. ಮತ್ತೆ ಪೇಟೆ ರಸ್ತೆಯಲ್ಲಿ ವಾಪಸು ಬರುತ್ತಿದ್ದಾಗ ರಾಮನ್ ಪುಸ್ತಕ ಮಾರುವ ತಂಬಿಸ್ವಾಮಿ ಅಂಗಡಿಯ ಮುಂದೆ ನಿಂತ.

ಮುದುಕ ವ್ಯಾಪಾರಿ ರಾಮನ್‌ನನ್ನು ನೋಡಿ "ಏನೋ. ತಂಬಿ, ಆಗಲೇ ಪುಸ್ತಕ ಕೊಳ್ಳಲು ಬಂದೆಯಾ ?" ಅಂದ.

"ಈ ಹೊತ್ತಲ್ಲ, ತಾತ ಇಷ್ಟರಲ್ಲೇ ಬರ್ತೀನಿ" ರಾಮನ್ ಪಾದಗಳನ್ನು ಎತ್ತರಿಸಿ ನಿಂತು ಹೊತ್ತಗೆಗಳನ್ನು ಜೋಡಿಸಿಟ್ಟಿದ್ದ ಬೀರುವನ್ನು ದಿಟ್ಟಿಸಿದ "ಆಗಲೇ ಹದಿನಾರು ನಯಾಪೈಸಾ ಕೂಡಿಟ್ಟಿದ್ದೀನಿ," ರಾಮನ್ ಹೆಮ್ಮೆಯಿಂದ ಹೇಳಿದ. "ಮುಂದಿನವಾರದ ವೇಳೆಗೆ ಪುಸ್ತಕಕ್ಕೆ ಸಾಕಾಗುವಷ್ಟು ದುಡು ಕೂಡುತ್ತೆ" ಬೆಟ್ಟದ ಹೂಗಳ ಶೋಧನೆ ಚೆನ್ನಾಗಿಯೇ ನಡೆದಿತ್ತು. ದಿನವೂ

ನಾಲ್ಕು ಹೊಸ ಗಿಡಗಳನ್ನು ಮರ್ಕಿಸಮ್ಮನಿಗೆ ತಂದುಕೊಟ್ಟು ಒಂದು ರೂಪಾಯಿ ಪಡೆಯುತ್ತಿದ್ದ. ಅದರಿಂದ ಒಂದು ನಯಾಪೈಸಾ ಸಿಗುತ್ತಿತ್ತು, ಜತೆಗೆ ಪೈನ್ ಶಂಕು,ಅಣಬೆ, ಬೇರಿ ಹಣ್ಣು ಮುಂತಾದವನ್ನು ಮಾರಿ ಇನ್ನಷ್ಟು ಹಣ ಗಳಿಸಿದಾಗ ಇನ್ನೊಂದು ಪೈಸಾ ಸಿಗುತ್ತಿತ್ತು, ಅದಾಗಿ ಸ್ವಲ್ಪ ಚಿಲ್ಲರೆ ಉಳಿದು ಮಾರನೇ ದಿನ ಅದಕ್ಕೆ ಇನ್ನಷ್ಟು ಸೇರಿಸಿ ಒಂದು ರೂಪಾಯಿ ಮಾಡಿ ಇನ್ನೊಂದು ಪೈಸಾ ಗಳಿಸಿದ ಸಂದರ್ಭಗಳೂ ಹಲವಿದ್ದುವು. ಈಗಲೇ ಹದಿನಾರು ನಯೇಪೈಸೇ ಇದ್ದುದರಿಂದ ಪುಸ್ತಕಕ್ಕೆ ಬೇಕಾದ ಹಣ ಕೂಡಿಸಲು ಹೆಚ್ಚು ದಿನ ಬೇಕಾಗದು.

ಆ ಸಣ್ಣ ಪುಸ್ತಕಗಳ ಹೆಸರುಗಳನ್ನು ಓದುವುದನ್ನು ಬಿಟ್ಟು ರಾಮನ್ ಸಾಮಾನಿನ ಗಂಟನ್ನು ಹೆಗಲಿಗೇರಿಸಿ ಹೊರಡಲು ತಿರುಗಿದ. ಆಗಲೇ ಅವನು ಇನ್ನೊಂದು ಪುಸ್ತಕ ಕಂಡಿದ್ದು,

ಅದು ಕಾಗದದ ಹೊದಿಕೆಯ ತೆಳುವಾದ ಹೊದಿಕೆಯಲ್ಲ, ನಿಜವಾದ ಪುಸ್ತಕ. ಒಂದು ರಟ್ಟಿನ ಕವಚದಲ್ಲಿ ಜಲ್ಲಿಕಾಗದದ ನಡುವೆ ಈ ಪುಸ್ತಕವನ್ನಿಟ್ಟು ಅದನ್ನು ತಂಬುಸ್ವಾಮಿ ಗಾಜಿನ ಬೀರುವಿನ ಒಂದು ಮೂಲೆಯಲ್ಲಿಟ್ಟಿದ್ದ. ದಪ್ಪನೆಯ ಆ ಪುಸ್ತಕದ ಕಪ್ಪನೆಯ ಹೊದಿಕೆ ಹೊಳೆಯುತ್ತಿತ್ತು. ಮುಖ ಪತ್ರದ ಮೇಲೆ ಅದರ ಹೆಸರು ಚಿನ್ನದ ಅಕ್ಷರಗಳಲ್ಲಿ ಪ್ರಕಾಶಿಸುತ್ತಿತು. ರಾಮನ್ ಅದನ್ನೇ ನೋಡುತ್ತ ನಿಂತ. ಸಾಮಾನಿನ ಗಂಟು ಮತ್ತೆ ನೆಲಕ್ಕೆ ಕುಸಿಯಿತು,

"ತಾತ" ರಾಮನ್ ಮೆಲುದನಿಯಲ್ಲಿ ಕೇಳಿದ. "ಆ ಪುಸ್ತಕ– ಅದೇನು ?"

"ಆ; ತಂಬಿ. ಅದು ನಿಜವಾದ ಪುಸ್ತಕ. ನಾನಿಲ್ಲಿ ಎಷ್ಟೋ ವರ್ಷಗಳಿಂದ ಇದ್ದೇನೆ; ಅಂಥ ಪುಸ್ತಕ ನೋಡಿಲ್ಲ. ನಿಜವಾಗಿ ಅದು ಬೆಲೆ ಬಾಳುವಂಥದು,"

"ತಾತ, ನಾನು....ನಾನು ಅದನ್ನು ನೋಡಬಹುದೇ ?"

"ತಂಬಿ, ನೀನು ಅದನ್ನು ಮುಟ್ಟಗೊಡುವುದಿಲ್ಲ. ಆದರೆ ನಾನೇ ತೆಗೆದು ತೋರಿಸುತ್ತೇನೆ" ಎಚ್ಚರಿಕೆಯಿಂದ ಕೈಗಳನ್ನು ಬಟ್ಟೆಯೊಂದರಲ್ಲಿ ಒರೆಸಿಕೊಂಡು, ಕತ್ತಿನಲ್ಲಿ ದಾರಕ್ಕೆ ಬಿಗಿದಿದ್ದ ಸಣ್ಣ ಬೀಗದ ಕೈನಿಂದ ಗಾಜಿನ ಬೀರುವನ್ನು ತೆರೆದ. ಒಳಗಿನಿಂದ ರಟ್ಟಿನ ಕವಚವನ್ನು ಹಾಗೆಯೇ ತೆಗೆದು

ಹುಷಾರಾಗಿ ಕೆಳಗಡೆ ಮಣೆಯ ಮೇಲಿಟ್ಟ. ರಾಮನ್ ಪುಸ್ತಕವನ್ನು ನೋಡಿದ.

"ರಾಮಾಯಣ." ಮುಂಭಾಗದಲ್ಲಿದ್ದ ಚಿನ್ನದ ಅಕ್ಷರಗಳನ್ನು ಓದುತ್ತ ರಾಮನ್ ನಿಧಾನವಾಗಿ ಉಸಿರೆಳೆದುಕೊಂಡ, ರಾಮನ ಪುರಾಣ ಕಥೆ; ಯಾರ ಹೆಸರನ್ನು ತನಗೂ ಇಟ್ಟಿದ್ದರೋ ಆ ಮಹಾ ಭಾರತೀಯ ವೀರನ ಕಥೆ, ರಾಮನ ಸುಂದರ ರಾಣಿಯನ್ನು ಅಪಹರಿಸಿಕೊಂಡು ಹೋಗಿದ್ದ ಲಂಕೆಯ ರಾಕ್ಷಸರಾಜ ರಾವಣನಿಗೂ. ರಾಮನಿಗೂ ನಡೆದ ಯುದ್ಧದ ಕಥೆ.

"ಅದರಲ್ಲಿ ಚಿತ್ರಗಳೂ ಇವೆ. "ತಂಬುಸ್ವಾಮಿ ಹೇಳುತ್ತಿದ್ದ ಪುಸ್ತಕದ ಪುಟಗಳನ್ನು ತೆರೆದು ಒಂದು ಚಿತ್ರ ತೋರಿಸುತ್ತಿದ್ದಾಗ ಆತನ ಕೈಬೆರಳುಗಳು. ನಡುಗುತ್ತಿದ್ದವು. ಆ ಚಿತ್ರ ಹನುಮಂತನದು. ವಾಯುಪುತ್ರನಾದ ಮಾರುತಿಯದು. ರಾಕ್ಷಸ ರಾಜನ ವಿರುದ್ಧ ಯುದ್ಧದಲ್ಲಿ ರಾಮನ ಕಡೆ ಹೋರಾಡಿದ್ದು ಈತನ ವಾನರ ಸೇನೆಯೇ. ಎಂಥ ಬಣ್ಣಗಳು ! ಅಚ್ಚ ಕೆಂಪು, ಹೊಳೆಯುವ ಹಳದಿ, ಹಸಿರು. ನೀಲಿ, ಬಣ್ಣದ ಚಿತ್ರಗಳಿದ್ದ ಪುಸ್ತಕವನ್ನು ರಾಮನ್ ನೋಡಿದ್ದೇ ಇಲ್ಲ. ಅವನ ಬಳಿಯಿದ್ದ ಹೊತ್ತಗೆಗಳಲ್ಲಿ ಮುದ್ರಣದ ಕಪ್ಪು ಬಣ್ಣದಲ್ಲೇ ಇದ್ದ ಒರಟಾದ ರೇಖಾ ಚಿತ್ರಗಳಿದ್ದುವಷ್ಟೇ.

ತಂಬುಸ್ವಾಮಿ ಮೃದುವಾಗಿ ಪುಸ್ತಕ ಮುಚ್ಚಿ ಮತ್ತೆ ಅದನ್ನು ಬೀರುವಿನೊಳಗಿಡುತ್ತಿದ್ದಂತೆ ರಾಮನ್ ಮೌನವಾಗಿ ನೋಡುತ್ತಿದ್ದ: ಅವನ ಬಾಯಿ ತೆರೆದುಕೊಂಡಿದ್ದುದು ಅವನಿಗೇ ತಿಳಿದಿರಲಿಲ್ಲ. ಪುಸ್ತಕ ಮತ್ತೆ ಗಾಜಿನ ಬೀರುವಿನಲ್ಲಿ ತನ್ನ ಸ್ಥಾನಕ್ಕೆ ಸೇರಿದಾಗ ರಾಮನ್ ಎಚ್ಚತ್ತು "ತಾತ, ಅಂಥ ಪುಸ್ತಕ ನಾನು ನೋಡಿಯೇ ಇಲ್ಲ" ಎಂದ.

"ನಾನೂ ಅಷ್ಟೇ. ಅದು ಒಬ್ಬ ದೊಡ್ಡ ಹಣವಂತ– ಪಂಡಿತರದು, ನೀನೆ ನೋಡಿದಂತೆ ಆತ ಅದಕ್ಕೆ ವಿಶೇಷವಾಗಿ ರಟ್ಟು ಹಾಕಿಸಿ ಅದರ ಮೇಲೆ ಚಿನ್ನದಲ್ಲಿ ಹೆಸರು ಬರೆಸಿದ್ದಾನೆ."

"ಅದರ ಬೆಲೆ ಎಷ್ಟು ತಾತ ?"

"ನಾನು ಹತ್ತು ರೂಪಾಯಿ ಕೇಳುತ್ತಿದೀನಿ ತಂಬಿ. ಆದರೆ ನಿನಗೆ ಗುಟ್ಟಾಗಿ ಹೇಳುತ್ತೇನೆ– ಸುಮಾರು ಏಳು ರೂಪಾಯಿಗೆ ಮಾರುತ್ತೇನೆ"

"ಏಳು ರೂಪಾಯಿ !"

"ಹೌದು ಏಳು ರೂಪಾಯಿ," ತಂಬುಸ್ವಾಮಿ ಹೇಳಿದ "ಅಥವಾ ಕೊನೆಗೆ ಆರೂವರೆ ರೂಪಾಯಿಗೆ ಮಾರುತ್ತೇನೆ. ಅದಕ್ಕಿಂತ ಒಂದು ನಯಾ ಪೈಸಾ ಕಡಿಮೆಯಾದರೂ ಕೊಡೋಲ್ಲ. ಅಲ್ಲಿಗೂ ಅಂಥ ಪುಸ್ತಕಕ್ಕೆ ಅದೂ ಕಡಿಮೆಯೇ" ಒಂದು ಬಟ್ಟೆ ತೆಗೆದುಕೊಂಡು ಆತ ಗಾಜಿನ ಬೀರು ಒರೆಸತೊಡಗಿದ.

ರಾಮನ್ ಥಟ್ಟನೆ ನುಡಿದ "ತಾತ, ಒಂದಲ್ಲ ಒಂದು ದಿನ ನಾನು ಆ ಪುಸ್ತಕ ಕೊಂಡುಕೋತೀನಿ."

ತಂಬುಸ್ವಾಮಿ ಧೂಳೊರಸುವುದನ್ನು ನಿಲ್ಲಿಸಿ ಹುಡುಗನತ್ತ ನೋಡಿದ. "ಒಂದು ದಿನ ನೀನೂ ಕೊಳ್ಳಬಹುದು."

"ಆದರೆ ಅದಕ್ಕೆ ಬಹು ದಿನ ಬೇಕು" ರಾಮನ್ ತಡವರಿಸಿದ ದನಿಯಲ್ಲಿ ಹೇಳಿದ. "ಆಗ ಅದು ಅಲ್ಲಿ ಇರುವುದೇ ಇಲ್ಲವೇನೋ "

"ಇರದಿರಬಹುದು, ಅಥವಾ ಇದ್ದರೂ ಇದ್ದೀತು."

"ನಾನು—ನಾನು ಹೋಗಿಬರ್ತೀನಿ ತಾತ" ಎಂದು ರಾಮನ್ ಹೇಳಿ ಸಾಮಾನಿನ ಗಂಟನ್ನು ಮತ್ತೆ ಹೆಗಲಿಗೇರಿಸಿ ಓಡು ನಡಿಗೆಯಲ್ಲಿ ತಂಬುಸ್ವಾಮಿ ಅಂಗಡಿಯಿಂದ ರಸ್ತೆಯಲ್ಲಿ ಸಾಗಿದ. ಏನಾದರೊಂದನ್ನು ಅಷ್ಟು ಉತ್ಕಟವಾಗಿ ಬಯಸಿದರೆ ಆ ಬಯಕೆಯೇ ನೋವುಂಟುಮಾಡಬಹುದು. ಪುಸ್ತಕದ ಬಗ್ಗೆ ರಾಮನ್ ಹಾಗೇ ಯೋಚಿಸಿದ.

ಆರೂವರೆ ರೂಪಾಯಿ ! ಒಂದು ಪುಸ್ತಕಕ್ಕೆ ಆರೂವರೆ ರೂಪಾಯಿ ಯಾರು ಕೊಡುತ್ತಾರೆ ? ಆದರೆ ಆ ಪುಸ್ತಕಕ್ಕೆ ಆ ಬೆಲೆಯೂ ಅಗ್ಗವೆಂದು ತಂಬುಸ್ವಾಮಿ ಹೇಳಿದ, ರಾಮನ್ ಅವನನ್ನು ನಂಬಿದ. ಅಂಥ ಪುಸ್ತಕದೊಂದಿಗೆ ರಾಮನ್ ತಾನೇ ಪಂಡಿತನಾಗಬಹುದು. ಮರ್ಕಿನಮ್ಮನ ಬಂಗಲೆಯಲ್ಲಿ ಕಪಾಟುಗಳಲ್ಲಿದ್ದ ಪುಸ್ತಕಗಳಂತಹ ಪುಸ್ತಕ ಅದು, ಪುಸ್ತಕದಂಗಡಿಯ ತಂಬುಸ್ವಾಮಿ ಅಂಗಡಿಯಲ್ಲಿ ಅಂಥ ಪುಸ್ತಕ ಸಿಗುವುದೆಂದು ಯಾರು ತಾನೇ ಯೋಚಿಸಬಲ್ಲರು ?

ಆರೂವರೆ ರೂಪಾಯಿ. ತಾನು ಸಂಪಾದಿಸಿದ ಪ್ರತಿ ರೂಪಾಯಿಗೂ ತನಗೆ ಒಂದು ನಯಾಪೈಸಾ. ಒಂದು ರೂಪಾಯಿಗೆ ನೂರು ನಯಾಪೈಸಾ. ಆರೂವರೆ ರೂಪಾಯಿಗೆ ಆರುನೂರ ಐವತ್ತು ನಯೇಪೈಸೇ. ಪುಸ್ತಕಕ್ಕೆ

ಬೇಕಾದಷ್ಟು ಹಣ ಬೇಕಾದರೆ ತಾನು ಆರುನೂರ ಐವತ್ತು ರೂಪಾಯಿ ಗಳಿಸಿ ಬೇಕು !

ರಾಮನ್ ನಡುಹಾದಿಯಲ್ಲಿ ಹಾಗೇ ನಿಂತುಬಿಟ್ಟ. ಆರುನೂರ ಐವತ್ತು ರೂಪಾಯಿ ! ಹೀಗಿದ್ದೂ ಎಂದಾದರೊಂದು ದಿನ ತಾನು ಆ ಪುಸ್ತಕ ಕೊಳ್ಳು ವೆನೆಂದು ತಂಬುಸ್ವಾಮಿಗೆ ಹೇಳಿದ್ದ. ತಂಬುಸ್ವಾಮಿ ತನ್ನಲ್ಲೇ ಎಷ್ಟು ನಕ್ಕಿರ ಬೇಕು ! ಆರುನೂರ ರೂಪಾಯಿ ಐವತ್ತು !

ಆದರೆ ಅವಕ್ಕೇನಾದರೂ ಒಂದು ದಾರಿಯಿರಬೇಕು– ಎಂದು ರಾಮನ್ ನಿಧಾನವಾಗಿ ನಡೆಯುತ್ತ ಯೋಚಿಸಿದ. ಪ್ರಾಯಶಃ ನನಗಾಗಿ ಹೆಚ್ಚು ಹಣ ಸಂಪಾದಿಸುವ ದಾರಿಯೇನನ್ನಾದರೂ ಹುಡುಕುತ್ತೇನೆ. ಹೇಗಾದರೂ, ಎಂದಾದರೊಂದು ದಿನ ನಾನು ಆ ಪುಸ್ತಕ ಹೊಂದಲೇಬೇಕು. ಎಂದಾದ ರೊಂದು ದಿನ ಖಂಡಿತ ತೆಗೆದುಕೊಳ್ಳುತ್ತೇನೆ.

# ೧೦

ದಿನಗಳುರುಳಿದವು. ಸಡಿಲವಾಗಿದ್ದ ಇಟ್ಟಿಗೆಯ ಹಿಂದೆ ಇಟ್ಟಿದ್ದ ಪುಟ್ಟ ಗಂಟಿನಲ್ಲಿ ಈಗ ಮೂವತ್ತೆಂಟು ಪೈಸಾಗಳಿದ್ದವು. ಆದರೆ ತಂಬುಸ್ವಾಮಿಯ ಬಳಿಯಿದ್ದ ಕಾಗದದ ಹೊದಿಕೆಯ ಪುಸ್ತಕಗಳಲ್ಲೊಂದನ್ನು ಕೊಳ್ಳಲು ರಾಮನ್‌ಗೆ ಮನಸ್ಸಾಗಲಿಲ್ಲ. ನಿಜ, ಪೇಟೆಗೆ ಹೋದಾಗಲೆಲ್ಲ ಅವನು ತಂಬುಸ್ವಾಮಿಯ ಅಂಗಡಿ ಮುಂದೆ ನಿಲ್ಲುತ್ತಿದ್ದ. ಆದರೆ ಸಣ್ಣ ಪುಸ್ತಕಗಳನ್ನಿಟ್ಟಿದ್ದ ಬೀರುವಿನ ಕಡೆ ಅವನು ಎಂದೂ ನೋಡಲಿಲ್ಲ; ಗಾಜಿನ ಬೀರುವಿನಲ್ಲಿ ಮುಂದುಗಡೆ ಜಲ್ಲಿ ಕಾಗದದ ನಡುವೆ ಇದ್ದ ಆ ಚಿನ್ನದ ಹೆಸರಿನ ಪುಸ್ತಕವನ್ನೇ ನೋಡುತ್ತಿದ್ದ.

"ಎಂದಾದರೊಂದು ದಿನ ನಾನು ಆ ಪುಸ್ತಕ ಕೊಳ್ಳುತ್ತೇನೆ." ಪ್ರತಿಸಲ ಅಂಗಡಿಯಿಂದ ಹೊರಡುವಾಗಲೂ ರಾಮನ್ ಹೇಳುತ್ತಿದ್ದ. ಬೇಕಾದರೆ ತಂಬುಸ್ವಾಮಿ ನಗಲಿ! ಆದರೆ ಆ ಮುದುಕ ವ್ಯಾಪಾರಿ ನಗಲಿಲ್ಲ. ತಲೆ ಅಲ್ಲಾಡಿಸಿ ಎಂದಿನಂತೆ ಉತ್ತರವಿತ್ತ.

"ಯಾವೊತ್ತಾದರೂ ಒಂದು ದಿನ, ತಂಬಿ ನೀನೂ ಕೊಳ್ಳಬಹುದು.'

"ಆದರೆ ಆ ವೇಳೆಗೆ ಅದು ಇಲ್ಲಿ ಇರುವುದೇ ಇಲ್ಲವೇನೋ. ತಾತ."

"ಇಲ್ಲದಿರಬಹುದು, ತಂಬಿ, ಅಥವಾ ಇದ್ದರೂ ಇದ್ದೀತು"

ಈಗ ಎಲ್ಲವೂ ಚೆನ್ನಾಗಿಯೇ ನಡೆದಿತ್ತು. ಪ್ರತಿ ವಾರ ಬಸ್ ಡ್ರೈವರು ರಾಮನ್ ಕೈಗೆ ಬೂದು ಬಣ್ಣದ ಲಕೋಟೆಯೊಂದನ್ನಿತ್ತು ಅವನ ತಾಯಿಗೆ ಕೊಡಲು ಹೇಳುತ್ತಿದ್ದ. ನಿಜ. ಆ ಹಣ ತಮಗೆ ಅಗತ್ಯವಿದ್ದ ಸಾಮಾನುಗಳಿಲ್ಲಕ್ಕೂ ಸಾಕಾಗುತ್ತಿರಲಿಲ್ಲ, ಆದರೆ ಈಗ ಅವರುಗಳು ತಿನ್ನಲು ಅನ್ನ ಇಲ್ಲವೆಂದು ಹೆದರಬೇಕಾದ ಪರಿಸ್ಥಿತಿಯಂತೂ ಇರಲಿಲ್ಲ. ಪುಟ್ಟ ಮಗುವಿಗೆ ಚಳಿಗಾಲಕ್ಕೆ ಬೆಚ್ಚನೆಯ ಹೊಸ ಬಟ್ಟೆಗಳಿದ್ದವು. ಬಹುದಿನಗಳಿಂದ ಸೋರುತ್ತಿದ್ದ

ಹಳೆಯ ನೀರಿನ ಪಾತ್ರೆಯ ಬದಲು ಹೊಸದೊಂದು ಬಂದಿತು.

ಇನ್ನು ರಾಮನ್ ಪೈನ್ ಶಂಕುಗಳನ್ನಾರಿಸಲು ಹೋಗುತ್ತಿರಲಿಲ್ಲ, ಅವಕ್ಕೀಗ ಗಿರಾಕಿಯೇ ಇರಲಿಲ್ಲ, ಅದರ ಬದಲು ಅವನು ಮರ್ಕಿಸಮ್ಮನಿಗಾಗಿ ಹೂಗಳನ್ನು ಅರಸಲು ಕಾಲವನ್ನು ವಿನಿಯೋಗಿಸುತ್ತಿದ್ದ. ದಿನಗಳು ಕಳೆದಂತೆ ಹೂಗಳು ದೊರೆಯುವುದು ಕಷ್ಟಕರವಾಗುತ್ತ ಬಂದು ದಿನದಿನಕ್ಕೂ ಕೆರೆಯಾಚೆ



ಹೆಚ್ಚು ದೂರಕ್ಕೆ ಹೋಗಬೇಕಾಗುತ್ತಿತ್ತು. ಆದರೆ ಕೆಲವೊಮ್ಮೆ ಅವನು ಒಂದು ಅಪರೂಪದ ಹೂ ತಂದಾಗ ಮರ್ಕಿನಮ್ಮನಿಗೆ ಸಂತೋಷವಾಗಿ ಆಕೆ ಮಾಮೂಲಿಗಿಂತ ಇನ್ನಷ್ಟು ಹೆಚ್ಚು ಹಣ ಕೊಡುತ್ತಿದ್ದಳು. ಒಂದು ದಿನ ಕಡಿದಾದ ಬಂಡೆಯೊಂದರ ಮಧ್ಯದಲ್ಲಿ ಬೆಳೆದಿದ್ದ ಲಿಲಿ ಹೂವೊಂದನ್ನು ತಂದಾಗ ಆಕೆ ಅದೊಂದಕ್ಕೇ ಒಂದು ರೂಪಾಯಿ ಕೊಟ್ಟಳು.

ಸಮಯವಿದ್ದಾಗೆಲ್ಲ ರಾಮನ್ ಮರ್ಕಿನಮ್ಮ ಚಿತ್ರ ಬರೆಯುವುದನ್ನು ನೋಡುತ್ತ ನಿಲ್ಲುತ್ತಿದ್ದ. ಒಮ್ಮೆ ಖಾಲಿಯಾಗಿದ್ದ ಬಿಳಿಯ ಹಾಳೆಯ ಮೇಲೆ ಆಕೆಯ ಕುಂಚ ಕುಶಲತೆಯಿಂದ ಆಡಿದಾಗ ಹೂವು ಬೆಳೆದು ಅರಳುತ್ತಿದ್ದ ಬಗೆಯು ನೋಡಲು ಸ್ವಾರಸ್ಯವಾಗಿತ್ತು; ಅವನು ನಿಂತು ನೋಡುವುದು ಮರ್ಕಿನಮ್ಮನಿಗೂ ಇಷ್ಟವಿದ್ದಂತೇ ಇತ್ತು.

"ನನಗೆ ತಮಿಳು ಮಾತಾಡುವುದನ್ನು ಅಭ್ಯಾಸ ಮಾಡಿಸಿಕೊಡು" ಎಂದ ಆಕೆ ಒಂದು ದಿನ ಕೇಳಿದಳು,

"ಅಮ್ಮ ತಮಿಳನ್ನು ಚೆನ್ನಾಗಿಯೇ ಮಾತಾಡುವರಲ್ಲಾ" ರಾಮನ್ ಲಜ್ಜೆಯಿಂದ ನುಡಿದ. ನಿಜ, ಕೆಲವೊಮ್ಮೆ ಮರ್ಕಿನಮ್ಮ ಬಳಸುತ್ತಿದ್ದ ಪದ ಗಳು ವಿಚಿತ್ರವಾಗಿ ಕಾಣುತ್ತಿದ್ದವು. ಇಂಗ್ಲಿಷ್ ಮಾತಾಡುವಂತೆ ತಮಿಳನ್ನೂ ಆಕೆ ನಿಧಾನವಾಗಿ ಮಾತಾಡುತ್ತಿದ್ದಳು. ಆದರೆ ಆಕೆ ಏನು ಹೇಳುವಳೆಂಬುದು ರಾಮನ್‌ಗೆ ಚೆನ್ನಾಗಿ ತಿಳಿಯುತ್ತಿತ್ತು. ಮರ್ಕಿನ್ ಜನ ತಮಿಳು ಮಾತಾಡುವುದೇ ಅಪರೂಪವಾಗಿತ್ತು.

"ಥ್ಯಾಂಕ್ಯು, ರಾಮನ್. ಆ ಭಾಷೆ ಕಲಿಯಲು ಬಹಳ ಕಷ್ಟ. ಆದರೆ ನನ್ನ ಶಾಲೆಯಲ್ಲಿ ನಾವು ತಮಿಳಿನಲ್ಲೇ ಪಾಠ ಹೇಳಿಕೊಡಬೇಕು."

"ಅಮ್ಮ ಶಾಲೆಯಲ್ಲಿ ಪಾಠ ಹೇಳುವರೇನು ?" ರಾಮನ್ ಚಕಿತನಾಗಿ ಲಜ್ಜೆಬಿಟ್ಟು ಕೇಳಿದ. ಮರ್ಕಿನಮ್ಮ ಶಾಲಾಮಾಸ್ತರು ಮುನಿಸ್ವಾಮಿಯಂತೆ ಕೈಯಲ್ಲಿ ಬೆತ್ತ ಹಿಡಿದು ತರಗತಿಯಲ್ಲಿ ನಿಂತಿರುವುದನ್ನು ಅವನು ಊಹಿಸಿ ಕೊಳ್ಳಲಾರದಾದ,

"ಹೌದಪ್ಪಾ, ಹೌದು." ಅವನ ಅಚ್ಚರಿ ಮರ್ಕಿನಮ್ಮನಿಗೆ ತಮಾಷೆಯಾಗಿ ಕಂಡಿತು, "ಬಯಲು ಸೀಮೆಯಲ್ಲಿ ನಮ್ಮದೊಂದು ಶಾಲೆಯಿದೆ. ಅದು ಬಹು ದೊಡ್ಡ ಶಾಲೆ, ನಿಜವಾಗಿ ಒಂದು ಕಾಲೇಜು–ಬೆಳೆದ ಹುಡುಗರು ಮತ್ತು

ಹುಡುಗಿಯರಿಗೆ."

"ಹುಡುಗಿಯರಿಗೆ !"–ರಾಮನ್ ಆಚ್ಚರಿಯಿಂದ ಕೇಳಿದ–"ನಿಮ್ಮ ಕಾಲೇಜಿನಲ್ಲಿ ಹುಡುಗಿಯರೂ ಇದ್ದಾರೇನು ?"

"ಹೌದು, ಏಕಿರಬಾರದು ?"

"ಆದರೆ ಹೆಣ್ಣುಮಕ್ಕಳಿಗೆ ಓದು ಬರಹ ಬೇಕಾಗಿಲ್ಲವಲ್ಲ, ಅವರು ಸುಮ್ಮನೆ ಮದುವೆಯಾಗಿ ಮನೆಕೆಲಸ ನೋಡಿಕೊಳ್ಳುವರು ; ಓದು ವ್ಯರ್ಥವಾಗುವುದು" ಸದಾ ತಾನು ಹಿರಿಯರಿಂದ ಕೇಳಿ ಒಪ್ಪಿಕೊಂಡಿದ್ದ ಆ ಕಾರಣ ಆವನ ಕಿವಿಗೇ ಶಿಥಿಲವಾಗಿ ಕೇಳಿಸಿತು.

"ಹಾಂ ! ಅಲ್ಲೇ ಇರೋದು ವಿಷಯ" ಮರ್ಕಿನಮ್ಮ ವಿವರವಾಗಿ ಹೇಳಿದಳು" ನಿಜ, ಹುಡುಗಿಯರು ಮದುವೆಯಾಗಿ ಮನೆ ನೋಡಿಕೊಳ್ಳುತ್ತಾರೆ. ಆದರೆ ಆಮೇಲೆ ಅವರುಗಳು ತಮ್ಮ ಮಕ್ಕಳಿಗೆ ಪಾಠ ಹೇಳಿಕೊಡುತ್ತಾರೆ. ಅವರು ತಮ್ಮ ಮಕ್ಕಳಿಗೆ ಹೇಳಿಕೊಡುತ್ತಾರೆ–ಹೀಗೆಯೇ ಸಾಗುತ್ತದೆ. ಅಷ್ಟೇ ಅಲ್ಲ. ರಾಮನ್, ನಮ್ಮ ಶಾಲೆಯಲ್ಲಿ ಬರೀ ಓದುಬರಹವಷ್ಟೇ ಅಲ್ಲದೆ ಇನ್ನೂ ಎಷ್ಟೋ ವಿಷಯಗಳನ್ನು ಹೇಳಿಕೊಡುತ್ತೇವೆ– ಉತ್ತಮ ಬೆಳೆ ಬೆಳೆಯುವುದು ಹೇಗೆ. ಉತ್ತಮ ಮನೆಗಳನ್ನು ಕಟ್ಟುವುದು ಹೇಗೆ ಮುಂತಾದವು. ಹೆಣ್ಣುಮಕ್ಕಳಿಗೆ ಉತ್ತಮ ಅಡಿಗೆ ಮಾಡುವುದು ಹೇಗೆ ಖಾಯಿಲೆ ಬಂದವರನ್ನು ನೋಡಿಕೊಳ್ಳುವುದು ಹೇಗೆ ಇವನ್ನೆಲ್ಲ ಹೇಳಿಕೊಡುತ್ತೇವೆ....ಆಮೇಲೆ ನಮ್ಮ ಶಾಲೆಯಲ್ಲಿ ಕಲಿತ ಜನ ತಮ್ಮ ಹಳ್ಳಿಗಳಿಗೆ ಹೋಗಿ ಇತರರಿಗೆ ಹೇಳಿಕೊಡುತ್ತಾರೆ. ಅದೇ ಎಲ್ಲಕ್ಕಿಂತ ಮುಖ್ಯ"

"ಓ ಅಮ್ಮಾ ! ಎಂದಾದರೊಂದು ದಿನ ನಾನು ಅಂಥ ಶಾಲೆಗೆ ಹೋಗಬಲ್ಲೆನಾದರೆ!"

ಮರ್ಕಿನಮ್ಮ ಕಣ್ಣರಳಿಸಿ ನೋಡಿದಳು "ಪ್ರಾಯಶಃ ಓದಲೂ ಓದೀಯೆ ಯಾರಿಗೆ ಗೊತ್ತು. ನಿನಗೆ ಎಷ್ಟು ವಯಸ್ಸು ರಾಮನ್ ?"

"ಇನ್ನೇನು ಹನ್ನೆರಡು."

ಮರ್ಕಿನಮ್ಮ ತಲೆ ಅಲ್ಲಾಡಿಸಿದಳು. "ಹಾಗಾದರೆ ಇನ್ನು ಸ್ವಲ್ಪ ಕಾಲ ಕಳೆಯಬೇಕು. ಅದುವರೆಗೂ ನೀನು ಕಷ್ಟಪಟ್ಟು ಕೆಲಸಮಾಡಿದರೆ–ಅಂದಹಾಗೆ ನೀನಿಲ್ಲಿ ಶಾಲೆಗೆ ಹೋಗುತ್ತೀಯಾ?"

"ಹೌದಮ್ಮ–ಹೆಚ್ಚು ಕಮ್ಮಿ ಈಗ ಒಂದು ವರ್ಷದಿಂದ ಶಾಲೆಗೆ ಹೋಗು ತ್ತಿದ್ದೇನೆ. ಅಂದರೆ ನಮ್ಮ ತಂದೆ ಬಯಲು ಸೀಮೆಗೆ ಹೋಗುವವರೆಗೂ ಶಾಲೆಗೆ ಹೋಗುತ್ತಿದ್ದೆ, ಈಗಲೂ ಓದನ್ನೇನೋ ಮುಂದುವರಿಸಿದ್ದೇನೆ. ತಂದೆ ಹಿಂದಿರು ಗಿದೊಡನೆ ಮತ್ತೆ ಶಾಲೆಗೆ ಹೋಗುತ್ತೇನೆ. ಅಥವಾ ಇನ್ನೂ ಮುಂಚೆಯೇ ಆದರೂ ಆದೀತು, ನನಗಂತೂ ಶಾಲೆಗೆ ಹೋಗಲು ಬಹು ಕಾತುರ. ನಾನು ಶಾಲೆ ಬಿಟ್ಟಾಗಲೇ ನನ್ನ ವಯಸ್ಸಿನ ಇತರರಿಗೆ ಸರಿಸಮನಾಗಿ ಪಾಠಗಳನ್ನು ಓದಿದ್ದೆ."

"ಒಂದು ವರ್ಷದಲ್ಲಿ ಅಷ್ಟೊಂದು ಮಾಡಿರಬೇಕಾದರೆ ನೀನು ಕಷ್ಟ ಪಟ್ಟೇ ಇರಬೇಕು."

ರಾಮನ್ ಹೂಗುಟ್ಟಿದ. ಆಸಕ್ತಿಯಿಂದ ಲಗುಬಗೆ ಮಾತು ಮುಂದುವರಿ ಸಿದ, "ಎಲ್ಲಕ್ಕಿಂತ ನನಗೆ ತುಂಬಾ ಹಿಡಿಸುವುದೆಂದರೆ ಓದುವುದು. ನನ್ನ ಶಾಲೆ ಯಲ್ಲಿ ಓದುವುದರಲ್ಲಿ ನಾನೇ ಅತ್ಯುತ್ತಮ. ನಮ್ಮ ಮನೆತನದಲ್ಲಿ ಓದಲು ಕಲಿ ತಿರುವುದು ನಾನೇ ಮೊದಲು" ಇದನ್ನು ಅವನು ಹೆಮ್ಮೆಯಿಂದ ಹೇಳಿ ಅದ ರಿಂದ ಮರ್ಕಿನಮ್ಮ ಪ್ರಭಾವಿತಳಾಗುವಳೇ ಎಂದು ನೋಡಲು ಮಾತು ನಿಲ್ಲಿ ಸಿದ,

ವಿಚಾರಮಗ್ನಳಾಗಿ ಆಕೆ ಅವನತ್ತ ನೋಡುತ್ತಾ "ಅದು ಬಹು ದೊಡ್ಡ ಜವಾಬ್ದಾರಿ" ಎಂದಳು.

ಮಾತು ಮುಂದುವರಿಸಲು ಬಾಯಿತೆರೆದಿದ್ದ ರಾಮನ್ ಹಾಗೆಯೇ ನಿಲ್ಲಿ ಸಿದ. ಆಕೆ ಇನ್ನೂ ಹೆಚ್ಚಿಗೆ ಹೇಳಿ ಮೆಚ್ಚಿಗೆ ಸೂಚಿಸುವಳೆಂದು ನಿರೀಕ್ಷಿಸಿದ ಅವ ನಿಗೆ ನಿರಾಶೆಯಾಯಿತು.

ಕ್ಷಣ ಕಾಲ ಸುಮ್ಮನಿದ್ದು ಅವನು ಮುಂದುವರಿಸಿದ. "ಒಂದು ದಿನ ನಾನೂ ಒಬ್ಬ ದೊಡ್ಡ ಪಂಡಿತನಾಗುತ್ತೇನೆ. ತುಂಬಾ ಪುಸ್ತಕಗಳನ್ನು ಓದು ತ್ತೇನೆ. ತುಂಬಾ ಪುಸ್ತಕಗಳನ್ನು ಸ್ವಂತವಾಗಿ ಇಟ್ಟುಕೊಳ್ಳುತ್ತೇನೆ. ಬೀರುಗಳ ಗಟ್ಟಲೆ ಪುಸ್ತಕ ಇಡುತ್ತೇನೆ. ನಾನು ತುಂಬಾ ವಿಷಯಗಳನ್ನು ಅರಿಯುವ ಇಚ್ಛೆಯಿದೆ"

"ಒಳ್ಳೆಯದು; ಆಮೇಲೆ?" ಮರ್ಕಿನಮ್ಮ ತಲೆ ಅಲ್ಲಾಡಿಸಿ ಕೇಳಿದಳು.

ಏನೂ ತೋಚದೆ ನಿಂತ ರಾಮನ್. ಕಸಿವಿಸಿಗೊಂಡು ಕಾಲಿನ ಭಂಗಿ

ಬದಲಿಸುತ್ತ ನಿಂತ.

"ಬಹಳ ವಿಷಯಗಳನ್ನೆಲ್ಲಾ ಕಲಿತಮೇಲೆ ಮುಂದೇನು ಮಾಡುತ್ತೀಯ?" ಮರ್ಕಿನಮ್ಮ ಮತ್ತೆ ಕೇಳಿದಳು. ಆಕೆಯ ನೀಲಿ ಕಣ್ಣುಗಳು ಆಸಕ್ತಿಯಿಂದ ಅವನನ್ನು ನೋಡುತ್ತಿದ್ದವು.

"ಅದೇಕೆ?-ಅವನ್ನು ತಿಳಿದುಕೊಳ್ಳುತ್ತೇನೆ. ಅಷ್ಟೆ" ಎಂದು ಅವನು ತಡವರಿಸುತ್ತ ಹೇಳಿದ.

ಮರ್ಕಿನಮ್ಮ ಇನ್ನು ಏನೋ ಹೇಳಬಹುದೆಂದು ನಿರೀಕ್ಷಿಸಿದ ರಾಮುನ್. ಆದರೆ ಆಕೆ ಮತ್ತೆ ಸುಮ್ಮನೆ ತಲೆ ಅಲ್ಲಾಡಿಸಿ ಮತ್ತೆ ಚಿತ್ರ ಬರೆಯುವುದರತ್ತ ದೃಷ್ಟಿ ಹರಿಸಿದಳು. ಮೊದಲು ರಾಮುನ್ ಅನ್ಯಮನಸ್ಕನಾಗಿ ಅದನ್ನು ನೋಡುತ್ತಿದ್ದ. ಆಕೆ ಕುಶಲತೆಯಿಂದ ಬರೆಯುತ್ತಿದ್ದಂತೆ ಹಸಿರು, ಹಳದಿ, ಬೂದಿ ಬಣ್ಣದ ರೇಖೆಗಳಿಂದ ಕಾಗದದ ಮೇಲೆ ಹೂವು ರೂಪುಗೊಳ್ಳುತ್ತಿದ್ದಂತೆ ಹೆಚ್ಚು ಗಮನವಿಟ್ಟು ನೋಡತೊಡಗಿದ. ಥಟ್ಟನೆ ಧೈರ್ಯ ಬಂದು ಅವನು ಬಹುಕಾಲದಿಂದ ತನ್ನ ಮನದಲ್ಲಿದ್ದ ಪ್ರಶ್ನೆ ಕೇಳಿದ.

"ಅಮ್ಮ ಹೂಗಳ ಚಿತ್ರ ಬರೆಯುವುದೇಕೆ?"

ಸ್ವಲ್ಪ ಹೊತ್ತು ಮರ್ಕಿನಮ್ಮ ಮಾತಾಡದೆ ಕೆಲಸ ಮುಂದುವರಿಸಿದಳು. ರಾಮುನ್-ಆ ಪ್ರಶ್ನೆಯನ್ನು ತಾನು ಕೇಳಬಾರದಾಗಿತ್ತೆಂದು ಅವಡುಗಚ್ಚಿಕೊಂಡ; ಆಕೆಗೆ ಕೋಪ ಬಂದುಬಿಟ್ಟಿದ್ದರೆ-! ಆದರೆ ಆಕೆ ಎಂದಿನಂತೆ ನಗುಮುಖದಿಂದ ಅವನತ್ತ ನೋಡಿ "ನಾನು ಈ ಬೆಟ್ಟದ ಪ್ರದೇಶಗಳಲ್ಲಿ ಬೆಳೆಯುವ ಎಲ್ಲ ಹೂಗಳ ಚಿತ್ರಗಳ ಪುಸ್ತಕವೊಂದನ್ನು ಮಾಡುತ್ತೇನೆ, ರಾಮುನ್" ಎಂದಳು.

ಪುಸ್ತಕ ರಚನೆ! ರಾಮುನ್ ಅಚ್ಚರಿಯಿಂದ ಕಣ್ಣರಳಿಸಿದ. ಪುಸ್ತಕ ಓದುವುದೇನೋ ಒಳ್ಳೆಯ ಕೆಲಸವೇ ಸರಿ; ಆದರೆ ಪುಸ್ತಕ ಬರೆಯುವುದು! ತಾನು ನೋಡಿದ್ದ ಪುಸ್ತಕಗಳೆಲ್ಲವೂ-ತನ್ನ ಬಳಿಯಿದ್ದ ಕಾಗದದ ಹೊದಿಕೆಯವು, ಮರ್ಕಿನಮ್ಮನ ಬಂಗಲೆಯಲ್ಲಿ ಬೀರುಗಳಲ್ಲಿರುವವು ಮತ್ತು ತಂಬುಸ್ವಾಮಿಯ ಗಾಜಿನ ಬೀರುವಿನಲ್ಲಿರುವ ಆ ಭವ್ಯವಾದ ಪುಸ್ತಕ ಎಲ್ಲವೂ ಯಾರಾದರೂ ಬರೆದಿರುವುದೇ ಎಂದು ಅವನಿಗೆ ಗೊತ್ತಿತ್ತು. ಆದರೆ ಈಗ ಒಂದು ಪುಸ್ತಕ ಬರೆಯುತ್ತಿದ್ದವರೊಬ್ಬರನ್ನೀ ಖುದ್ದಾಗಿ ಸಂಧಿಸಿದ್ದ. ಕಾಗದದ

ಮೇಲೆ ರೂಪುಗೊಂಡ ಈ ಚಿತ್ರಗಳು ಒಂದು ದಿನ ಹೊಳೆಯುವ ಪುಟಗಳ ಮೇಲೆ ಮುದ್ರಿತವಾಗಿ ಬಂಗಲೆಯಲ್ಲಿ ಕಪಾಟಿನಲ್ಲಿರುವ ಪುಸ್ತಕಗಳಂತೆ ರಟ್ಟು ಹಾಕಿ ಸಿದ್ಧಗೊಳಿಸುತ್ತಾರೆ. ಒಂದು ರೀತಿಯಲ್ಲಿ ಈ ಪುಸ್ತಕಕ್ಕೆ ರಾಮನ್‌ನೂ ಸಹಾಯಮಾಡಿದ್ದ.

ಆ ಯೋಚನೆ ಮನಸ್ಸಿಗೆ ಹರ್ಷವುಂಟುಮಾಡಿತು. ಆದರೆ ರಾಮನ್‌ಗೆ ಇನ್ನೊಂದು ವಿಷಯ ಅರ್ಥವಾಗಲಿಲ್ಲ. ಹಿಂಜರಿಕೆಯಿಂದಲೇ ಅವನು ಕೇಳಿದ: "ಅಮ್ಮಾ, ತೋಟದಲ್ಲಿರುವ ಹೂಗಳನ್ನೇ ಏಕೆ ಚಿತ್ರಿಸಬಾರದು ? ಅವು ಇನ್ನೂ ಸುಂದರವಾಗಿವೆಯಲ್ಲಾ."

ಮರ್ಕಿನಮ್ಮ ಚಿತ್ರಕ್ಕೆ ಕೊನೆಯ ಸೂಕ್ಷ್ಮ ರೇಖೆಗಳನ್ನು ತಿದ್ದಿ ಕುಂಚ ವನ್ನು ಕೆಳಗಿಟ್ಟು ಚಕ್ರದ ಕುರ್ಚಿಯಲ್ಲಿ ಹಿಂದಕ್ಕೊರಗಿ ಕುಳಿತಳು. ರಾಮನ್‌ನತ್ತ ನೋಡಿ ನಿಧಾನವಾಗಿ ಹೇಳಿದಳು : " ತೋಟದ ಹೂಗಳು ಹೆಚ್ಚು ಸುಂದರ ವಾಗಿರಬಹುದು. ಅವು ದೊಡ್ಡವು. ಬಣ್ಣವೂ ಹೆಚ್ಚು, ಆದರೆ ಅವು ಈ ಪ್ರದೇಶದವಲ್ಲ. ಬೆಟ್ಟದ ಹೂಗಳು ಇಲ್ಲಿಯವೇ. ಆದ್ದರಿಂದ ಅವುಗಳಲ್ಲಿ ಹಲವು ಹೂಗಳು ಹೆಚ್ಚು ಸುಂದರವಾಗಿಲ್ಲದಿದ್ದರೂ ಹೆಚ್ಚು ಮುಖ್ಯ; ಜನ ಅವುಗಳ ವಿಷಯ ತಿಳಿಯಬೇಕೆಂದು ನನಗಿಷ್ಟ. ಅದರಿಂದಲೇ ಅವುಗಳ ಬಗ್ಗೆ ಒಂದು ಪುಸ್ತಕ ಬರೆಯುತ್ತಿದ್ದೇನೆ."

"ಆದೊಂದು ವಿಷಯ ನೀನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು. ರಾಮನ್," ಆಕೆ ಮುಂದುವರಿಸಿ ಹೇಳಿದಳು ; ಚಿತ್ರಿಸಿದ್ದ ಹೂವನ್ನು ನೋಡು ತ್ತಿದ್ದರೂ ಆಕೆಯ ದೃಷ್ಟಿ ಎಲ್ಲೋ ದೂರಕ್ಕಿದ್ದ ಹಾಗೆ ಭಾಸವಾಯಿತು. "ಇಲ್ಲಿಗೆ ಸೇರಿದ, ಈ ಬೆಟ್ಟಗಳ, ಈ ದೇಶದ ಒಂದು ಭಾಗವಾಗಿರುವ ಈ ವಿಷಯಗಳು ಮುಖ್ಯ. ಏಕೆಂದರೆ ಅವು ಇಲ್ಲಿನವು. ಇದು ಕೇವಲ ಹೂಗಳಿಗಷ್ಟೇ ಅಲ್ಲ, ಇತರ ಎಷ್ಟೇ ವಿಷಯಗಳಿಗೆ. ಜನರಿಗೆ ಕೂಡಾ ಅನ್ವಯಿಸುವುದು, ನೀನು ಇಲ್ಲಿನವನು. ರಾಮನ್. ನಾನು ಅನೇಕ ಸಲ ಬೆಟ್ಟಕ್ಕೆ ಬಂದು ಈ ಬಂಗಲೆಯಲ್ಲಿ, ಬಯಲು ಸೀಮೆಯ ಶಾಲೆಯಲ್ಲಿ ಹಲವು ತಿಂಗಳುಗಳಿದ್ದು ಹೋಗುತ್ತಿದ್ದರೂ ಇಲ್ಲಿಗೆ ಸೇರಿದವಳಲ್ಲ. ಎಂದಾದರೊಂದು ದಿನ ನಾನು ಹೊರಟು ಹೋಗುತ್ತೇನೆ; ಶಾಲೆಯಲ್ಲಿ ಹುಡುಗ ಹುಡುಗಿಯರಿಗೆ ಪಾಠ ಹೇಳುವಾಗ ನಾನು ಅದನ್ನೇ ಯೋಚಿಸುತ್ತೇನೆ. ನಾನು ಅವರ

ಮಾಸ್ತರು ; ಆದರೂ ಅವರುಗಳು ನನಗಿಂತ ಮುಖ್ಯ, ಏಕೆಂದರೆ ಅವರು ಇಲ್ಲಿನವರು. ನಾನು ಹೋದ ಮೇಲೆಯೂ ಅವರುಗಳು ಇಲ್ಲೇ ಇದ್ದು ಇತರರಿಗೆ ಪಾಠ ಹೇಳುವರು. ನೀನೂ ಅಷ್ಟೇ ರಾಮನ್." ಆಕೆ ತಿರುಗಿ ನೇರವಾಗಿ ಅವನನ್ನು ನೋಡಿ ಹೇಳಿದಳು, " ನೀನು ಇಲ್ಲಿಗೆ, ಈ ಬೆಟ್ಟಗಳಿಗೆ, ಈ ದೇಶಕ್ಕೆ ಸೇರಿದವನು. ಆದ್ದರಿಂದ ಬೆಟ್ಟದ ಹೂಗಳಂತೆ ನೀನೂ ಮುಖ್ಯ"

ಆಕೆ ಕೂಡಲೆ ಮುಂದಕೆ, ಬಾಗಿ ಮೇಜಿನ ಮೇಲಿದ್ದ ಬಣ್ಣದ ಕೊಳವೆಗಳು, ಕುಂಚಗಳು ಮೊದಲಾದವನ್ನು ಪೆಟ್ಟಿಗೆಯೊಳಕ್ಕೆ ಹಾಕಿಡಲು ಆರಂಭಿಸಿದಳು. ರಾಮನ್ ತಕ್ಷಣ ಆಕೆಯ ನೆರವಿಗೆ ಹೋದ. ಈ ವೇಳೆಗೆ ಏನೇನು ಮಾಡಬೇಕೆಂಬುದು ಅವನಿಗೆ ತಿಳಿದಿತ್ತು, ಲೋಟದಲ್ಲಿದ್ದ ನೀರು ಚೆಲ್ಲಬೇಕು ; ಇನ್ನೂ ಒದ್ದೆ ಬಣ್ಣವಿದ್ದ ಚಿತ್ರದ ಹಲಗೆಯನ್ನು ಹುಷಾರಾಗಿ ಎತ್ತಿಕೊಂಡು ಮನೆಯೊಳಕ್ಕೊಯ್ದು ಅಗ್ಗಿಷ್ಟಿಕೆಯ ಬಳಿ ಮಾಡವೊಂದರ ಮೇಲೆ ಒಣಗಲು ಇಡಬೇಕು ; ಮೇಜನ್ನು ವರಾಂಡದಲ್ಲಿ ಅದರ ಸ್ಥಾನದಲ್ಲಿರಿಸಿ ಬಣ್ಣಗಳ ಪೆಟ್ಟಿಗೆ ತೆಗೆದಿಡಬೇಕು.

ಈ ಕೆಲಸ ಮುಗಿದ ಮೇಲೆ ರಾಮನ್, "ಅಮ್ಮಾ ಪುಸ್ತಕ ಮುಗಿದ ಮೇಲೆ ನಾನು ಅದನ್ನು ನೋಡಬಹುದೇ ?" ಎಂದ.

" ಅದಕ್ಕೇನು. ಆಗಬಹುದು. ನನ್ನ ಕಾಲು ಸಾಕಷ್ಟು ವಾಸಿಯಾದಾಗ ಅಂದರೆ ಇನ್ನೂ ಮೂರು ವಾರ ಬಿಟ್ಟು ನಾನು ಇಲ್ಲಿಂದ ಹೊರಡುವೆ. ಆದರೆ ಎಲ್ಲ ಹೂಗಳನ್ನೂ ಮುಗಿಸಲು ಅಷ್ಟು ದಿನ ಸಾಲದು. ಮುಂದಿನ ವರ್ಷ ಬಂದಾಗ ಇನ್ನೂ ಕೆಲವು ಹೂಗಳನ್ನು ಚಿತ್ರಿಸುತ್ತೇನೆ. ಪ್ರಾಯಶಃ ಅದರಾಚೆಯ ವರ್ಷ ಪುಸ್ತಕ ಮುಗಿಯಬಹುದು."

" ಪುಸ್ತಕಗಳೆಂದರೆ ನನಗೆ ತುಂಬಾ ಇಷ್ಟ." ರಾಮನ್ ತನ್ನ ಮನದಲ್ಲಿದ್ದು ದನ್ನು ಆಕೆಗೆ ತಿಳಿಸಿದ. "ಓದಲು ಪುಸ್ತಕಗಳನ್ನು ಕೊಂಡುಕೊಳ್ಳಬೇಕೆಂದು ನಾನು ಸಾಧ್ಯವಾದಷ್ಟೂ ಹಣ ಕೂಡಿಡುತ್ತೇನೆ." ಮರುಕ್ಷಣವೇ ಉದ್ರೇಕದ ಭರದಲ್ಲಿ ತಂಬುಸ್ವಾಮಿಯ ಅಂಗಡಿಯ ಗಾಜಿನ ಬೀರುವಿನಲ್ಲಿರುವ ಆ ಪುಸ್ತಕ ಅದರ ಹೊದಿಕೆಯ ಮೇಲಿರುವ ಚಿನ್ನದ ಅಕ್ಷರಗಳು, ಬಣ್ಣ ಬಣ್ಣದ ಚಿತ್ರಗಳು, ಅದರೊಳಗಿರಬಹುದಾದ ಸೊಗಸಾದ ಕಥೆಗಳು–ಎಲ್ಲವನ್ನೂ ಮರ್ಕಿನಮ್ಮನಿಗೆ ಬಣ್ಣಿಸಿ ಹೇಳಿದ.

“ಎಂದಾದರೊಂದು ದಿನ ನಾನು ಆ ಪುಸ್ತಕ ಕೊಳ್ಳುತ್ತೇನೆ. ಯಾವುದೋ ಒಂದು ದಿನ ಅದು ನನ್ನದಾಗುವುದು” ಎಂದು ಅವನು ಹೆಮ್ಮೆಯಿಂದ ಹೇಳಿದ.

“ಅದು ಒಳ್ಳೇ ಅದ್ಭುತವಾದ ಪುಸ್ತಕವಿರಬೇಕು.”

“ಹೌದು. ನಿಜವಾದ ಪಂಡಿತರು ಇಟ್ಟಿರಬಹುದಾದಂಥ ಪುಸ್ತಕ ಅದು.”

ಮರ್ಕಿನವ್ಮು ಆಸಕ್ತಿಯಿಂದ ಅವನನ್ನು ದಿಟ್ಟಿಸಿದಳು. ಆಕೆ ಏನು ಯೋಚಿಸುತ್ತಿರಬಹುದು? ಕೂಡಲೆ ಆಕೆ ನಕ್ಕು. “ನಿನಗೆ ಒಳ್ಳೆಯದಾಗಲಿ, ರಾಮನ್. ಒಂದು ದಿನ ನಿನ್ನ ಪುಸ್ತಕ ನಿನ್ನ ಕೈಸೇರುವುದೆಂದು ನಾನು ನಂಬುತ್ತೇನೆ” ಎಂದು ಗಂಭೀರವಾಗಿ ಹೇಳಿದಳು.

# ೧೧

ಮರ್ಕಿನಮ್ಮನ ಬೆಟ್ಟದ ಮೇಲಿನ ಮಾಸದ ಕೊನೆಯ ವಾರ ಅದು. ಇನ್ನು ಕೆಲವು ದಿನಗಳಲ್ಲೇ ಹೂಗಳನ್ನು ಕೇಳುವವರೇ ಇಲ್ಲವಾಗುವದು. ಗೋಡೆಯಲ್ಲಿ ಗುಟ್ಟಾಗಿಟ್ಟಿದ್ದ ಗಂಟಿಗೆ ಪ್ರತಿದಿನ ಸೇರಿಸಲು ಒಂದು ಪೈಸಾ ಕೂಡಾ ಇಲ್ಲವಾಗುವದು. ರಾಮನ್ ಮತ್ತೆ ವಾಸಂತಿಯೊಡನೆ ಪೈನ್ ಶಂಕುಗಳನ್ನು ಆರಿಸಲು ಹೋಗಬಹುದು; ಆದರೆ ಜನ ಇನ್ನೂ ಇದ್ದ ಬಂಗಲೆಗಳು ಎಲ್ಲೋ ಕೆಲವೇ ಮಾತ್ರ ಇದ್ದು ವಾರಕ್ಕೆ ಎರಡು ಮೂರು ಚೀಲದಷ್ಟು ಮಾರಾಟವಾಗುವುದೂ ಕಷ್ಟ. ಬಸ್ ಡ್ರೈವರು ನಗರದಿಂದ ತಪ್ಪದೆ ಬೂದು ಬಣ್ಣದ ಲಕೋಟೆ ತಂದು ಕೊಡುತ್ತಿದ್ದುದರಿಂದ ಅಕ್ಕಿಗೆ ಯೋಚನೆಯಿರಲಿಲ್ಲ. ಆದರೆ ಒಂದೇ ಒಂದು ರೂಪಾಯಿ ಸಂಪಾದಿಸಲೂ ಹಲವು ದಿನ ಹಿಡಿಯಬಹುದಾದ ಮುಂದಿನ ವಾರಗಳನ್ನು ಕುರಿತು ಯೋಚಿಸುತ್ತ ರಾಮನ್‌ಗೆ ಎದೆ ಕುಗ್ಗಿತು, ಈಗ ಅವನ ಹತ್ತಿರ ಐವತ್ತೇಳು ನಯೇ ಪೈಸೆ ಇದ್ದುವು; ಅಷ್ಟೊಂದು ಹಣ ಅವನ ಜೀವಮಾನದಲ್ಲೇ ಎಂದೂ ಇರಲಿಲ್ಲ. ಆದರೆ ಅದು ಅರ್ಧ ರೂಪಾಯಿಗಿಂತ ಸ್ವಲ್ಪ ಜಾಸ್ತಿ. ಇನ್ನು ಆ ಪುಸ್ತಕ ಕೊಳ್ಳಬೇಕೆಂದರೆ ಆರೂವರೆ ರೂಪಾಯಿ ಬೇಕು!

ಒಂದು ಮಧ್ಯಾಹ್ನ ರಾಮನ್ ಮನೆಯ ಹೊರಗಡೆ ಒಬ್ಬನೇ ಗೋಡೆಗೆ ಒರಗಿ ಕುಳಿತು ಎದುರಾಗಿದ್ದ ತರಕಾರಿ ತೋಟದತ್ತ ನೋಡುತ್ತಿದ್ದ; ತೋಟ ಈಗ ಬಹುತೇಕ ಬಾಡಿ ಗಿಡಗಳು ಸೊರಗಿದ್ದವು. ಒಂದು ಸಣ್ಣ ರೆಂಬೆಯನ್ನು ಕೈಗೆತ್ತಿಕೊಂಡು ಅದನ್ನು ಅರ್ಧಕ್ಕೆ ಮುರಿದ, ಹೀಗೆಯೇ ತೀರಾ ಸಣ್ಣಗಾಗಿ ಮುರಿಯಲು ಆಗದಷ್ಟರವರೆಗೂ ತುಂಡು ಮಾಡಿದ. ಆಮೇಲೆ ಒಂದೊಂದೇ ತುಣುಕನ್ನು ಮೇಲಕ್ಕೆಸೆದು ಅದು ಅವು ಮತ್ತೆ ನೆಲಕ್ಕೆ ಧೂಳಿಗೆ ಬೀಳುವುದನ್ನೇ

ನೋಡುತ್ತ ಕುಳಿತಿದ್ದ. ಹಾಗೇ ಯೋಚಿಸಿದ–ಆರೂವರೆ ರೂಪಾಯಿ. ಆರೂ ವರೆ ರೂಪಾಯಿ ಪಡೆಯಲು ಏನಾದರೂ ಹಾದಿಯಿರಬೇಕು.

ವಾಸಂತಿ ಬಂದು ಅವನ ಪಕ್ಕದಲ್ಲಿ ಕೂಡುವವರೆಗೆ ಅವಳು ಬಂದುದೇ ಅವನಿಗೆ ಕೇಳಿಸಲಿಲ್ಲ. "ಅಣ್ಣಾ, ದೊಡ್ಡಪ್ಪ ನನಗೆ ಒಂದಿಷ್ಟು ಮಿಠಾಯಿ ಕೊಟ್ಟ! ನಿನಗೂ ಒಂದು ಬೇಕೆ?"

ಬೇಡವೆಂದು ರಾಮನ್ ತಲೆ ಅಲ್ಲಾಡಿಸಿದ. ಅವನು ಒಬ್ಬನೇ ಕುಳಿತು ಯೋಚಿಸಲು ಬಯಸಿದ್ದ; ಇನ್ನೂ ಆರು ರೂಪಾಯಿ ಗಳಿಸಲು ಏನಾದರೂ ಆದಿ ಹುಡುಕಬೇಕಾಗಿತ್ತು.

"ಈಚೆಗೆ, ನೀನು ತುಂಬಾ ದುಃಖದಿಂದಿದ್ದೀಯ, ಅಣ್ಣಾ ಏನು ಶಾಲೆಗೆ ಹೋಗಲು ಆಗುತ್ತಿಲ್ಲ ಅಂತಲೆ?"

"ಇಲ್ಲ" ಆದರೆ ಅಷ್ಟು ಒರಟಾಗಿ ಹೇಳಬೇಕೆಂದು ಅವನು ನಿಜವಾಗಿ ಅಂದುಕೊಂಡಿರಲಿಲ್ಲ, ವಾಸಂತಿ ನೊಂದುಕೊಂಡುವನ್ನು ಕಂಡು ತನ್ನ ಯೋಜನೆ ಬದಿಗಿರಿಸಿ ತಂಗಿಯತ್ತ ನೋಡಿದ. ತಂದೆ ಹೊರಟುಹೋದ ಮೇಲೆ ತಾವಿಬ್ಬರೂ ಅಣಬೆ ಆರಿಸಲು ಹೋದ ಆ ದಿನವನ್ನು ಜ್ಞಾಪಿಸಿಕೊಂಡು "ನೀನು ಅದೃಷ್ಟವಂತ. ರಾಮನ್. ನಿನಗೆ ಓದಲು ಬರುತ್ತದೆ. ನನಗೂ ಬಂದಿದ್ದರೆ ಅನಿಸುತ್ತದೆ" ಎಂದು ಅವಳು ಹೇಳಿದ್ದುದು ಜ್ಞಾಪಕಕ್ಕೆ ಬಂತು.

"ಹುಡುಗಿಯರು ಓದುವ ಅಗತ್ಯವಿಲ್ಲ". ಅವನು ಹಾಗೆಂದಾಗ ಇವಳೂ ಅದನ್ನೊಪ್ಪಿದಳು. ಅವಳೂ ಆ ಮಾತನ್ನು ಎಷ್ಟೋ ಸಲ ಹೇಳಿದ್ದಳು. ಆದರೆ ರಾಮನ್ ಈಗ ಮರ್ಕಿನಮ್ಮನ ಬಗ್ಗೆ ಯೋಚಿಸಿದ: ಆಕೆ ಓದುವುದಷ್ಟೇ ಅಲ್ಲ. ಪುಸ್ತಕಗಳನ್ನು ಬರೆಯುತ್ತಿದ್ದಳು. ಶಾಲೆಯಲ್ಲಿ ಪಾಠ ಹೇಳಿಕೊಡುತ್ತಲೂ ಇದ್ದಳು. ಮರ್ಕಿನಮ್ಮನ ಶಾಲೆಯ ವಿಷಯ ಮನಸ್ಸಿಗೆ ಬಂದಿತು. ಹುಡುಗರ ಜತೆಗೆ ಹುಡುಗಿಯರೂ ಅಲ್ಲಿದ್ದು ಬರೀ ಓದುಬರಹವನ್ನೇ ಅಲ್ಲದೆ ಇನ್ನೂ ಎಷ್ಟೋ ವಿಷಯಗಳನ್ನು ಕಲಿಯುತ್ತಿದ್ದರು. ವಾಸಂತಿ ಅಂಥ ಶಾಲೆಗೆ ಹೋಗುವ ಸಂಭವವಿಲ್ಲ: ಆದರೂ ಅವಳು ಓದಲು ಕಲಿಯಬಾರದೇಕೆ ?

ಕೂಡಲೆ ತನಗೇ ತಿಳಿಯದಂತೆ ರಾಮನ್ ಹೇಳುತ್ತಿದ್ದ: "ವಾಸಂತಿ ನೀನು ಓದುವುದನ್ನು ಕಲಿಯಲು ಇಷ್ಟವಿದೆಯಾ?"

ಅಚ್ಚರಿಯಿಂದ ಬಾಯ್ದೆರೆದು ನಿಂತಳು ವಾಸಂತಿ.

"ನೀನೂ ಓದಲು ಕಲಿಯುತ್ತೀಯಾ ಎಂದು ಕೇಳಿದೆ. ನಾನೇ ನಿನಗೆ ಹೇಳಿಕೊಡುತ್ತೇನೆ."

"ನಿಜವಾಗಿ ನೀನು ಹೇಳುತ್ತಿದ್ದೀಯಾ ಅಣ್ಣ?" ಸಂತೋಷದಿಂದ ಅವಳ ಮುಖ ಅರಳಿದುದನ್ನು ನೋಡಿದ.

"ನಿಜವಾಗಿಯೇ. ಇಲ್ಲದಿದ್ದರೆ ಯಾಕೆ ಕೇಳ್ತೀನಿ"

"ಆದರೆ ಹುಡುಗಿಯರು–"

"ಹುಡುಗಿಯರು ಓದಲು ಕಲಿಯಬಾರದೆನ್ನುವುದಕ್ಕೆ ಕಾರಣವಿಲ್ಲ" ರಾಮನ್ ದೃಢವಾಗಿ ಹೇಳಿದ, "ನಾನೇ ನಿನಗೆ ಹೇಳಿಕೊಡುತ್ತೇನೆ. ನಾವು ಈ ಹೊತ್ತೆ ಷುರು ಮಾಡೋಣ"

ಅರ್ಧ ಗಂಟೆಯ ಮೇಲೆ ವಾಸಂತಿ ರಾಮನ್ ಮೊದಲು ಓದು ಕಲಿಯುತ್ತಿದ್ದಂಥ ಹಳೆಯ ಪುಸ್ತಕದ ಹಾಳೆಗಳಲ್ಲಿದ್ದುದನ್ನು ತಡವರಿಸುತ್ತ ಓದುವುದು ಮುಗಿದಿತ್ತು. ಆಗ ಒಲೆ ಹೊತ್ತಿಸಲು ಮರದ ಪುಳ್ಳೆಗಳನ್ನು ತರುವಂತೆ ತಾಯಿ ವಾಸಂತಿಯನ್ನು ಕೂಗಿದಳು. ಅದನ್ನು ಕೇಳಿ ವಾಸಂತಿ ಸೌದೆ ಹುಡುಕಲು ಇಳಿಜಾರಿನಲ್ಲಿಳಿದು ಓಡಿದಳು. ಅವಳ ಮುಖ ಇನ್ನೂ ಹೆಮ್ಮೆಯಿಂದ ಹೊಳೆಯುತ್ತಿತ್ತು. ಹಿಂದೆಂದೂ ಅನುಭವಿಸದಿದ್ದಂಥ ಅಪೂರ್ವ ಅನುಭವ ಅವನಿಗೆ ಬಂದಿತ್ತು. ಅದೇನೋ ಒಂದು ಶಕ್ತಿಯಿದ್ದಂತೆ ಎಂದು ಅವನು ಯೋಚಿಸಿದ. ಬೇರೆಯವರಿಗೆ ಜ್ಞಾನ ನೀಡುವ ಶಕ್ತಿ. ಪಾಠ ಹೇಳುವ ಶಕ್ತಿ,

ದಾಸನ್‌ಗೆ ಕೂಡಾ ಹೇಳಿಕೊಡಬಲ್ಲೆ ಎಂದು ರಾಮನ್ ಯೋಚಿಸಿದ. ಆಗ ಇನ್ನೊಂದು ಯೋಚನೆ ಬಂದಿತು. ಇನ್ನು ಮುಂದೆ ಓದಲು ಬರುವವನು ತಾನೊಬ್ಬನೇ ಆಗಿರುವುದಿಲ್ಲ. ಅದೇಕೋ ಅದು ಅವನಿಗೆ ಒಂದು ಬಗೆಯ ಶೂನ್ಯ ಭಾವನೆಯನ್ನು ಕೊಟ್ಟಿತು. "ನಾನೊಬ್ಬನೇ; ನಮ್ಮ ಮನೆಯಲ್ಲಿ ನಮ್ಮ ಹಳ್ಳಿಯಲ್ಲಿ ಓದಲು ಕಲಿತ ಮೊದಲಿಗ ನಾನೇ" ಎಂದು ಹೇಳುವುದರಲ್ಲಿ ಒಂದು ಸೊಬಗಿತ್ತು.

ಆದರೆ ಅದೇ ಉತ್ತಮವೆಂದು ಅವನು ಭಾವಿಸಿದ. ಅದಕ್ಕಿಂತ ಒಳ್ಳೆಯದು. ಹೃದಯದಲ್ಲಿ ಆ ಮಧುರ ಭಾವನೆ ಇನ್ನೂ ಇದ್ದಂತೆ ಅವನು ಸೌದೆ ಆರಿಸುವುದರಲ್ಲಿ ವಾಸಂತಿಗೆ ನೆರವಾಗಲು ಇಳಿಜಾರಿನಲ್ಲಿ ಕೆಳಕ್ಕೆ ನಡೆದ.

ಶುಕ್ರವಾರ ತಾನು ಹೊರಡುವುದಾಗಿ ಮರ್ಕಿನಮ್ಮ ಮಾರನೆಯ ದಿನ ರಾಮನ್‌ಗೆ ಹೇಳಿದಳು. ವಿಷಣ್ಣನಾಗಿ ರಾಮನ್ ಹೂಗುಟ್ಟಿದ. ಶುಕ್ರವಾರ ಅಂದರೆ ನಾಡಿದ್ದು.

"ಏನೇ ಆಗಲಿ; ಇನ್ನೂ ನೀನು ತರಲು ಹೆಚ್ಚಿಗೆ ಬೆಟ್ಟದ ಹೂಗಳು ಉಳಿದಿವೆಯೋ, ಇಲ್ಲವೋ ಎಂದು ನಾನು ಯೋಚಿಸತೊಡಗಿದ್ದೇನೆ. ಆದರೂ ನನಗೆ ತುಂಬಾ ಬೇಕಾದಂತಹ ಮಾದರಿಯು ನಮಗೆ ಇನ್ನೂ ಸಿಕ್ಕಿಲ್ಲ" ಎಂದಳಾಕೆ.

"ಎಂಥ ಮಾದರಿಯದು, ಅಮ್ಮಾ ?"

"ಬಹು ವಿಶಿಷ್ಟ ರೀತಿಯದು, ದಟ್ಟವಾದ ಕಾಡಿನಲ್ಲಿ ಮಾತ್ರ ಅದು ಬೆಳೆಯುವುದೆಂದು ಕಾಣುತ್ತದೆ. ಒಂದು ರೆಂಬೆಗೆ ಅಂಟಿಕೊಂಡ ಬಣ್ಣದ ಚಿಟ್ಟೆಯಂತೆ ಕಾಣುವ ಆ ಹೂವು ಬಹು ಸುಂದರವಾಗಿರುತ್ತದೆ. ಎಳೆಗೆಂಪು, ಬಿಳಿ, ಹಳದಿ ಅಥವಾ ಕಡುಗೆಂಪಿನ ಬಣ್ಣಕ್ಕಿರುವುದು. ನಾವು ಇಂಗ್ಲಿಷರು ಅದನ್ನು ಸೀತೆ ಹೂವು (ಆರ್ಚಿಡ್) ಎಂದು ಕರೆಯುತ್ತೇವೆ. ಅದಕ್ಕೆ ತಮಿಳು ಪದವೇನೋ ನನಗೆ ತಿಳಿಯದು."

"ಆರ್ಚಿಡ್"– ರಾಮನ್ ತಲೆ ಅಲ್ಲಾಡಿಸಿದ, ಮರ್ಕಿನಮ್ಮ ಹೇಳಿದ ಹೂವು ಯಾವುದೆಂಬುದರ ಕಲ್ಪನೆಯೂ ಅವನಿಗಿರಲಿಲ್ಲ.

"ಇರು, ಅದನ್ನು ಬರೆದು ತೋರಿಸುತ್ತೇನೆ. ಮೇಜಿನಿಂದ ಒಂದು ಕಾಗದ, ಪೆನ್ಸಿಲ್ ತೆಗೆದುಕೊಂಡು ಬಾ". ರಾಮನ್ ಅವನ್ನು ತಂದಾಗ ಆಕೆ ಉದ್ದನೆಯ ತೆಳು ಎಲೆಗಳು, ನೀಳವಾದ ಕಾಂಡ ಮತ್ತು ಅದರಿಂದ ಬೆಳೆದಿದ್ದ ಆರು ದಳಗಳ ಪುಟ್ಟ ಹೂಗಳಿದ್ದ ಚಿತ್ರ ಬರೆದಳು. ಒಂದು ದಳ ಮಾತ್ರ ಉಳಿದವಕ್ಕಿಂತ ದೊಡ್ಡದಾಗಿದ್ದು ಸುರುಳಿ ಸುತ್ತಿಕೊಂಡಿತ್ತು, ದೂರ ದಿಂದ ನೋಡಲು ಈ ಹೂಗಳು "ಒಂದು ರೆಂಬೆ ಮೇಲೆ ಕುಳಿತ ಚಿಟ್ಟೆಗ ಳಂತೆ"ಯೇ ಕಾಣುತ್ತಿದ್ದವೆಂದು ರಾಮನ್ ಊಹಿಸಿಕೊಂಡ.

"ಅಂಥವನ್ನು ನಾನು ಈ ಬೆಟ್ಟಗಳಲ್ಲಿ ಎಂದೂ ನೋಡಿಲ್ಲ ಅಮ್ಮಾ" ಎಂದು ಅವನು ವ್ಯಸನದಿಂದ ಹೇಳಿದ.

"ಅನ್ಯಾಯ. ಚಿತ್ರಿಸುವುದಕ್ಕಷ್ಟೇ ಅಲ್ಲದೆ ಅವನ್ನು ನನ್ನೊಡನೆ ಬಯು ಲುಸೀಮೆಗೆ ಒಯ್ದು ನಮ್ಮ ಮನೆಯಲ್ಲಿ ಬೆಳೆಸಬೇಕೆಂದು ನನಗೆ ತುಂಬಾ ಇಷ್ಟ"

"ಈ ಎರಡು ದಿನಗಳಲ್ಲಿ ಅದಕ್ಕಾಗಿ ಚೆನ್ನಾಗಿ ಹುಡುಕುತ್ತೇನೆ; ಸಿಕ್ಕರೂ ಸಿಕ್ಕಬಹುದು" ಎಂದು ರಾಮನ್ ಭರವಸೆಯಿತ್ತ.

"ಕೇಳು, ರಾಮನ್, ನೀನು ಒಂದು ಆರ್ಚಿಡ್ ಹುಡುಕಿ ತಂದರೆ ಮೂರು ರೂಪಾಯಿ ಕೊಡುತ್ತೇನೆ. ಆಗಬಹುದೇ ?"

ರಾಮನ್‌ಗೆ ಮಾತೇ ನಿಂತಿತು. ಮೂರು ರೂಪಾಯಿ ! ಒಂದು ಗಿಡಕ್ಕೆ ! ಒಂದಕ್ಕಿಂತ ಹೆಚ್ಚು ಸಿಕ್ಕರೆ........

"ಹುಡುಕಿ ತರುತ್ತೇನೆ, ಅಮ್ಮಾ. ಅದನ್ನು ಪತ್ತೆಮಾಡುತ್ತೇನೆ" ಅವಸರದಿಂದ ವಂದಿಸಿ ಹಿಂದಿರುಗಿ ಅವನು ಓಡತೊಡಗಿದ, ವೇಳೆ ವ್ಯರ್ಥಮಾಡುವಂತಿಲ್ಲ. ಆರ್ಚಿಡ್ ಹುಡುಕಲು ಈವೊತ್ತು ಮತ್ತು ನಾಳೆ ಮಾತ್ರ ಉಳಿದಿದ್ದವು. ಮರ್ಕಿನಮ್ಮನ ಬಸ್ಸು ಶುಕ್ರವಾರ ಬೆಳಿಗ್ಗೆ ಹೊರಡುವುದು, ಆದ್ದರಿಂದ ಶುಕ್ರವಾರ ಅದನ್ನು ಹುಡುಕಲು ಹೋಗುವ ಪ್ರಶ್ನೆಯೇ ಇಲ್ಲ. ಆರ್ಚಿಡ್ ಎಲ್ಲಿ ಬೆಳೆಯುವುದೆಂಬುದನ್ನು ತಕ್ಷಣ ಪತ್ತೆಮಾಡಬೇಕು.

ಯಾರನ್ನು ಕೇಳುವುದು ? ಶಾಲಾಮಾಸ್ತರು ಮುನಿಸ್ವಾಮಿಯನ್ನೇ? ಬೇಗ ಹೋದರೆ ಮಾಸ್ತರು ಹೊರಡುವುದರೊಳಗೆ ಶಾಲೆಯನ್ನು ತಲಪಬಹುದು. ರಸ್ತೆಯಲ್ಲಿ ಕೆಳಕ್ಕಿಳಿದು ಪೇಟೆಯತ್ತ ಓಡುತ್ತ ಸಾಗಿದ, ಕೈಲಾದಷ್ಟೂ ಓಡಿ ಇನ್ನೂ ಓಡಲು ಅಸಾಧ್ಯವಾದಾಗ ಮೇಲುಸಿರುಬಿಡುತ್ತ ಬೇಗ ಬೇಗ ನಡೆದು ಸ್ವಲ್ಪದೂರ ಕಳೆದ ಮೇಲೆ ಮತ್ತೆ ಓಡತೊಡಗಿದ,

ಮಾಸ್ತರು ಮುನಿಸ್ವಾಮಿ ಶಾಲೆಯ ಬಾಗಿಲಿಗೆ ಬೀಗ ಹಾಕುವರಲ್ಲಿದ್ದರು, ರಸ್ತೆಯಿಂದ ಈಚೆಗಿದ್ದ ದಿಣ್ಣೆ ಇಳಿಯುತ್ತ ರಾಮನ್ ಜಾರಿ ಬೀಳುತ್ತೇಳುತ್ತ "ಸಾರ್, ಸಾರ್ ! ದಯವಿಟ್ಟು ಒಂದು ನಿಮಿಷ ತಾಳಿ" ಅನ್ನುತ್ತ ಬರುತ್ತಿದ್ದುದನ್ನು ನೋಡಿ ಮಾಸ್ತರು ಅಚ್ಚರಿಗೊಂಡರು.

"ರಾಮನ್ ! ಏನದು ? ಇರು. ಸ್ವಲ್ಪ ನಿಧಾನವಾಗಿ ಉಸಿರಾಡು, ಏನು ಮತ್ತೆ ಶಾಲೆಗೆ ಬರುವಿಯೋ ?"

ಇನ್ನೂ ಏದುಸಿರು ಬಿಡುತ್ತ ರಾಮನ್ ಇಲ್ಲವೆಂದು ತಲೆ ಅಲ್ಲಾಡಿಸಿ ಹೇಳಿದ, "ಅಲ್ಲ; ಅದಲ್ಲ, ಸದ್ಯಕ್ಕಂತೂ ಬರುವುದಿಲ್ಲ. ಇನ್ನೇನೂ ಇಲ್ಲ– ನೀವು ಹೊರಡುವುದರೊಳಗೆ ನೋಡಬೇಕೆಂದು ಬಂದೆ– ನೀವೆಲ್ಲಿ ಹೊರಟು ಹೋಗಿರುತ್ತೀರೋ ಎಂದು ಚಿಂತೆಯಾಗಿತ್ತು– ಆ ವಿಷಯ ನಿಮ್ಮನ್ನು

ಮಾತ್ರವೇ ಕೇಳಬಹುದೆಂದು ನನಗನ್ನಿಸಿತು"–ಮತ್ತೆ ಅವನು ಬಳಲಿ ದೀರ್ಘ ವಾಗಿ ಉಸಿರೆಳೆದುಕೊಂಡ, ತಮ್ಮ ಕನ್ನಡಕದ ಮೇಲ್ಭಾಗದಿಂದ ದಿಟ್ಟಿಸಿ ನೋಡಲು ತಲೆ ತಗ್ಗಿಸಿ ಮುನಿಸ್ವಾಮಿ ನಿಂತರು. "ಸಾರ್ ಇಂಗ್ಲಿಷಿನಲ್ಲಿ ಆರ್ಚಿಡ್ ಎಂದು ಕೂಗುವಂಥ ಹೂವೊಂದನ್ನು ನಾನು ಅರಿಸಿ ತರಬೇಕಾಗಿದೆ. ಅದು ನಿಮಗೆ ಗೊತ್ತೇ ?" ಎಂದು ಕೊನೆಗೆ ರಾಮನ್ ಹೇಳಿದ.

"ಆರ್ಚಿಡ್ ?" ಮುನಿಸ್ವಾಮಿ ಹುಬ್ಬುಗಂಟಿಟ್ಟು ಯೋಚಿಸಿದರು. ರಾಮನ್ ಕಾತರದಿಂದ ನಿರೀಕ್ಷಿಸುತ್ತ ಕಾದು ನಿಂತ. "ಆರ್ಚಿಡ್ ? ಇಲ್ಲ. ಆ ಹೆಸರನ್ನು ನಾನು ಕೇಳಿದಂತಿಲ್ಲ. ಆದರೆ ನಾನು ಕಲಿತ ಇಂಗ್ಲಿಷಿನಲ್ಲಿ ಹೂಗಳ ಹೆಸರುಗಳು ಸೇರಿರಲಿಲ್ಲ; ಅದೇನು ಅಷ್ಟು ಮುಖ್ಯವೇ ?"

"ಹೌದು ಸಾರ್ ! ಅದನ್ನು– ಅದು ಬೆಳೆಯುವ ಜಾಗವನ್ನು ನಾನು ಪತ್ತೆಮಾಡಲೇಬೇಕು."

"ಹಾಗಾದರೆ ಅದು ಈಕಡೆ ಬೆಳೆಯುವುದೇ ?"

"ಎಲ್ಲೋ ಈ ಬೆಟ್ಟಗಳಲ್ಲಿ."

"ಹಾಗಾದರೆ ಆ ಹೂವಿನ ವಿಷಯ ಒಂದು ವೇಳೆ ತಿಳಿದಿದ್ದರೂ ನಾನು ನಿನಗೆ ಸಹಾಯ ಮಾಡುವ ಸ್ಥಿತಿಯಲ್ಲಿಲ್ಲ. ಏಕೆಂದರೆ ನಾನು ಈ ಬೆಟ್ಟದ ಪ್ರದೇಶದವನಲ್ಲ. ನನ್ನ ಮನೆ ಇರುವುದು ಬಯಲು ಸೀಮೆಯಲ್ಲಿ, ನಿನ್ನಷ್ಟು ಚೆನ್ನಾಗಿಯೂ ನನಗೆ ಈ ಬೆಟ್ಟಗಳು ತಿಳಿಯದು. ಕ್ಷಮಿಸು, ನಿನಗೆ ಸಹಾಯ ಮಾಡಲು ಆಗದಿರುವುದಕ್ಕಾಗಿ ನನಗೆ ವ್ಯಥೆಯಾಗುತ್ತದೆ. ಪ್ರಾಯಶಃ ಯಾರಾದರೂ ತಿಳಿದವರು ನಿನಗೆ ಸಿಗಬಹುದು, ನೋಡು." ರಾಮನ್‌ನಲ್ಲಿ ಮೂಡಿದ್ದ ನಿರಾಶೆಯನ್ನು ಗಮನಿಸಿ ಮಾಸ್ತರು ಹೇಳಿದರು.

ರಾಮನ್ ವಿಷಣ್ಣನಾಗಿ ತಲೆ ಅಲ್ಲಾಡಿಸಿದ, "ಉಪಕಾರವಾಯಿತು ಸಾರ್" ಎಂದು ಅವರಿಗೆ ವಂದಿಸಿ ನಿಧಾನವಾಗಿ ಹೆಜ್ಜೆ ಎಳೆದುಹಾಕುತ್ತ ದಿಣ್ಣೆಯನ್ನೇರಿ ರಸ್ತೆ ತಲಪಿದ.

ಇನ್ನಾರಿಗೆ ಗೊತ್ತು ? ಯಾರಾದರೂ ಹೂಗಳ ಹೆಸರುಗಳು ಬಲ್ಲವರಾಗಬೇಕು, ಅಂದಹಾಗೆ ಅವನ ದೊಡ್ಡಪ್ಪ ! ಇದನ್ನು ಮೊದಲೇ ಏಕೆ ಯೋಚಿಸಲಿಲ್ಲ ? ದೊಡ್ಡಪ್ಪನೇ ಸರಿ. ಆತ ವರ್ಕಿನ್ ಬಂಗಲೆಗಳ ತೋಟಗಳಲ್ಲಿ ಕೆಲಸ ಮಾಡಿದ್ದ, ಅನೇಕ ಹೂಗಳ ಇಂಗ್ಲಿಷ್ ಹೆಸರುಗಳನ್ನೂ ತಿಳಿದಿದ್ದ. ವರ್ಕಿನ್

ಜನ ಆರ್ಚಿಡ್ ಎಂದು ಕರೆಯುವ ಹೂವು ಆತನಿಗೆ ನಿಜವಾಗಿ ಗೊತ್ತೇ ಇರುತ್ತದೆ. ಅವನಲ್ಲಿ ಆಸೆ ಮೂಡಿ ಬೇಗ ಹೆಜ್ಜೆ ಹಾಕತೊಡಗಿದ.

ರಾಮನ್ ತನ್ನ ಮನೆ ತಲಪುವ ವೇಳೆಗೆ ಸಂಜೆ ಊಟದ ಸಮಯವಾಗಿತ್ತು. ಅವನು ತುಂಬಾ ತಳಮಳಗೊಂಡಿದ್ದು ಊಟಮಾಡುವುದೇ ಕಷ್ಟವಾಯಿತು, ಸಮಯ ದೊರೆತೊಡನೆ ಹೊರಕ್ಕೆ ನಡೆದು ದೊಡ್ಡಪ್ಪನ ಮನೆಯತ್ತ ಸಾಗಿದ.

"ಓ, ರಾಮನ್ ! ಇದೇನು ಆಶ್ಚರ್ಯ ! ಈಚೆಗೆ ನಿನ್ನನ್ನು ನೋಡಿಯೇ ಎಷ್ಟೋ ದಿನಗಳಾದವು, ದಿನವೆಲ್ಲಾ ಹೂಗಳನ್ನರಸಲು ಹೋಗುವಿಯೆಂದು ನಿಮ್ಮಮ್ಮ ಹೇಳುತ್ತಾಳೆ. ಒಳ್ಳೇ ಹರ್ಷದ ಹವ್ಯಾಸವೇ ಸರಿ !" ಆತನ ದನಿಯಲ್ಲಿ ಎಂದಿನಂತೆ ಕೀಟಲೆಯ ಭಾವವಿತ್ತು.

"ಒಳ್ಳೇ ಹರ್ಷದ್ದೇ ಹೌದು," ರಾಮನ್ ಸಮ್ಮತಿಸಿದ. "ಆದರೆ ಅದೂ ಕೆಲಸ ತಾನೇ ? ಕೆಲವೊಮ್ಮೆ ಅವೂ ಸಿಗುವುದೇ ಕಷ್ಟ. ಪ್ರತಿಸಲವೂ ಹೊಸ ಹೂಗಳನ್ನು ತರಬೇಕು."

"ಬಾಗಿಲ ಹೊರಗೆ ತೋಟದ ತುಂಬ ಹೂಗಳಿರುವಾಗ ಯಾರಾದರೂ ಕಾಡು ಹೂಗಳನ್ನೇಕೆ ಬಯಸುವರೋ ನಾನರಿಯೆ, ಆದರೂ"

"ಹೂಗಳ ವಿಷಯಕ್ಕೇ ನಾನು ನಿಮ್ಮನ್ನು ಕಾಣಲು ಬಂದಿದ್ದು," ರಾಮನ್ ಒಡನೆಯೇ ವಿವರಿಸಿದ–ವಿಷಯ ತಿಳಿಯುವ ಕಾತರದಿಂದ. "ಹೂಗಳು ಮತ್ತು ಅವುಗಳ ಇಂಗ್ಲಿಷ್ ಹೆಸರುಗಳ ಬಗ್ಗೆ ನಿಮಗೆ ಇಷ್ಟೊಂದು ತಿಳಿದಿದೆ. ನೀವು ನನಗೆ ಸಹಾಯ ಮಾಡಬಹುದೆಂದುಕೊಂಡಿದ್ದೇನೆ"

"ಒಂದು ಹೂವಿನ ಹೆಸರು ತಾನೇ ನಿನಗೆ ಬೇಕಾಗಿರುವುದು ? ಅದರ ಬಣ್ಣ ಆಕಾರ ಎಲ್ಲವನ್ನೂ ನನಗೆ ವಿವರಿಸು. ಅದು ಮರ್ಕಿನ್ ಬಂಗಲೆಗಳ ತೋಟದಲ್ಲಿ ಬೆಳೆಯುವುದಾದರೆ ನನಗೆ ಗೊತ್ತೇ ಇರುತ್ತದೆ ! ಆ ತೋಟಗಳಲ್ಲೇ ಅಲ್ಲವೆ ನಾನು ಅನೇಕ ವರ್ಷ ಕಳೆದದ್ದು ?"

"ಹೆಸರು ನನಗೆ ಆಗಲೇ ಗೊತ್ತು". ಎಂದು ರಾಮನ್ ನಡುವೆಯೇ ಹೇಳಿದ. ತನ್ನ ತೋಟಗಾರಿಕೆ ವರ್ಷಗಳ ವಿಷಯವಾಗಿ ದೊಡ್ಡಪ್ಪ ಮಾತಾಡಲು ಶುರು ಮಾಡಿಬಿಟ್ಟರೆ!

"ಇಂಗ್ಲಿಷಿನಲ್ಲಿ ಅದನ್ನು ಆರ್ಚಿಡ್ ಎನ್ನುತ್ತಾರೆ"

“ಆರ್ಚಿಡ್ ?” ದೊಡ್ಡಪ್ಪ ಕೇಳಿದ, “ಆರ್ಚಿಡ್ ? ನಿನಗೆ ಸರಿಯಾಗಿ ಗೊತ್ತಾ ? ಹೆಸರು ತಪ್ಪಾಗಿ ತಿಳಿದು ಕೊಂಡಿದ್ದೀಯೊ ಹೇಗೆ ?”

ರಾಮನ್ ಹೇಳಿದ : “ಹೆಸರನ್ನು ನಾನು ಸರಿಯಾಗಿಯೇ ಬಲ್ಲೆ. ವಾಸ್ತವವಾಗಿ ಅದು ತೋಟದ ಹೂವಲ್ಲ. ಬೆಟ್ಟದ ಹೂವು. ಅದು ಒಂದು ರೆಂಬೆ ಮೇಲೆ ಚಿಟ್ಟೆ ಕುಳಿತಂತೆ ಕಾಣುವುದು ”

”ರೆಂಬೆಯ ಮೇಲೆ ಚಿಟ್ಟೆ !” ಅವನ ದೊಡ್ಡಪ್ಪ ತಿಳಿಯದೆ ಸುಮ್ಮನೆ ಮಾರು ನುಡಿದು ತಲೆ ಅಲ್ಲಾಡಿಸಿದ. ಲಾರ್ಕ್‌ಸ್ಪರ್. ಫಾಕ್ಸ್‌ಗ್ಲೋವ್. ಮರಿಗೋಲ್ಡ್, ಕ್ರೈಸಾಂಥೆಮಮ್ ಇವುಗಳ ವಿಷಯವಾದರೆ ನಾನು ಹೇಳಬಲ್ಲೆ. ಆದರೆ ಆರ್ಚಿಡನ್ನು ನಾನು ಕೇಳಿಯೇ ಇಲ್ಲ. ಒಂದು ರೆಂಬೆಯ ಮೇಲೆ ಚಿಟ್ಟೆ ಕುಳಿತ ಹಾಗಿರುವ ಹೂವನ್ನು ಎಂದೂ ನೋಡಿಯೇ ಇಲ್ಲ.”

# ೧೨

ದೊಡ್ಡಪ್ಪನ ಮನೆಯಿಂದ ಹೊರಬಿದ್ದು ರಾಮನ್ ನಿಧಾನವಾಗಿ ಹೆಜ್ಜೆ ಹಾಕುತ್ತ ನಡೆದ. ನಿರಾಶೆಯಿಂದ ಅವನ ಭುಜಗಳು ಕುಗ್ಗಿ ಕಣ್ಣುಗಳಲ್ಲಿ ನೀರು ತುಂಬಿತ್ತು. ಆರ್ಚಿಡ್‌ನ ವಿಷಯ ಇನ್ನಾರಿಗೆ ತಿಳಿದಿದ್ದೀತು ?

ಸಂಜೆ ಇನ್ನೂ ಹೊತ್ತೇರಿರಲಿಲ್ಲ, ಆಕಾಶದಲ್ಲಿ ಮೋಡಗಳು ಕಪ್ಪಗೆ ದಟ್ಟವಾಗಿ ಕವಿದಿದ್ದು ಇನ್ನೇನು ಮಳೆ ಬರುವುದರಲ್ಲಿತ್ತು. ಅವನಿದ್ದಲ್ಲಿಂದ ಬೆಟ್ಟದ ಮೇಲುಗಡೆ ಅಷ್ಟೆತ್ತರದಲ್ಲಿ ತಾತ ನಟೇಶನ್ ಹೊತ್ತಿಸಿದ್ದ ಬೆಂಕಿ ಕಾಣಿಸಿತು. ತಾತ ನಟೇಶನ್ ! ಸುಮಾರು ಆತನಿಗೇನಾದರೂ--ಇಲ್ಲ, ಆರ್ಚಿಡ್ ಎಂದರೇನು ಎಂಬುದೂ ಆತನಿಗೆ ಗೊತ್ತಿರಲಾರದು. ಆದರೆ ಇಂಗ್ಲಿಷ್ ಹೆಸರು ಗೊತ್ತಿರದಿದ್ದರೂ ಚಿಟ್ಟೆಯಂತೆ ಕಾಣುವ ಹೂ ಆತನಿಗೆ ಗೊತ್ತಿದ್ದೀತು.

ತನ್ನ ಮನೆಗೆ ಹೋಗುತ್ತಿದ್ದ ರಾಮನ್ ಹಿಂದಿರುಗಿ ಬೆಟ್ಟದ ಮೇಲಕ್ಕೆ ನಡೆದ. ಕೆಲಕ್ಷಣಗಳಲ್ಲೇ ತಾತ ನಟೇಶನ್‌ನ ಬೆಂಕಿಯ ಸುತ್ತು ಹರಡಿದ್ದ ಬೆಳಕಿನ ಬಳಿ ಬಂದು ನಿಂತ.

ಎಲ್ಲವೂ ಅದೆಷ್ಟು ಸುಪರಿಚಿತವಾಗಿತ್ತು. ! ತನ್ನ ಮನೆಯ ಬಾಗಿಲ ಹೊರಗೆ ಮುದುಡಿ ಕುಳಿತಿದ್ದ ತಾತ ನಟೇಶನ್, ವೃದ್ಧ, ತೆಳ್ಳಗಿದ್ದು ಬಾಗಿದ್ದ. ಹೊದೆದಿದ್ದ ಕಂಬಳಿಯಿಂದ ಹೊರಕ್ಕೆ ಅವನ ನರಪೇತಲ ಮುಖ ಮಾತ್ರ ಕಾಣುತ್ತಿತ್ತು. ಮಕ್ಕಳು ಬೆಂಕಿಯ ಸುತ್ತ ಕುಳಿತು ಮೌನವಾಗಿ ಆತ ಹೇಳುವುದನ್ನು ಆಲಿಸುತ್ತಿದ್ದರು. ಬೆಂಕಿಗೆ ಅತಿ ಸಮೀಪದಲ್ಲಿ ಜೇಸುದಾಸನ್ ಇತರರೊಂದಿಗೆ ಕುಳಿತಿದ್ದ. ನೆರಳಿನಲ್ಲಿ ಕಾಣದೆ ಇರಬೇಕೆಂದು ರಾಮನ್ ಒಂದೆರಡು ಹೆಜ್ಜೆ ಹಿಂದಕ್ಕೆ ಸರಿದ. ತಾನು ಮತ್ತೆ ತಾತ ನಟೇಶನ್ನನ ಬೆಂಕಿ ಗೋಷ್ಠಿಗೆ ಬಂದೆನೆಂದು ಜೇಸುದಾಸನ್ ತಿಳಿಯುವ ಅಗತ್ಯವಿರಲಿಲ್ಲ. ಮತ್ತೆ ಜೇಸುದಾ

ಸನ್, ಅವನನ್ನು ಹೀಯಾಳಿಸುವನಷ್ಟೇ.

ಬೇರೆಯುವರೆಲ್ಲಾ ಹೋಗುವವರೆಗೆ ತಾತ ನಟೇಶನ್ನನೊಡನೆ ಮಾತಾಡಲು ಸಾಧ್ಯವಾಗುವುದಿಲ್ಲ. ಅವರುಗಳೂ ಬೇಗನೆ ಹೊರಟುಬಿಡಬಹುದು, ಏಕೆಂದರೆ ಯಾವುದೇ ಕ್ಷಣ ಮಳೆ ಆರಂಭವಾಗುವುದರಲ್ಲಿತ್ತು. ತಾತ ನಟೇಶನ್‌ನ ಮನೆಯ ಪಕ್ಕದ ಗೋಡೆಯಂಚಿಗೆ ಒರಗಿಕೊಂಡು ರಾಮುರ್ ಇತರರ ದೃಷ್ಟಿಗೆ ಬೀಳದಂತೆ ನಿಂತ. ಅಲ್ಲಿಂದ ಅವನಿಗೆ ತಾತ ನಟೇಶನ್ ಕಾಣಿಸುತ್ತಿರಲಿಲ್ಲ; ಆದರೆ ಆತನ ಚಿರಪರಿಚಿತ. ಕೀಚುದನಿ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಭಯಂಕರವಾದ "ಹಳದಿ ಕಣ್ಣಿನ" ಹುಲಿ ಕಥೆ ಹೇಳುತ್ತಿದ್ದ ಆ ಮಾಂತ್ರಿಕ ದನಿಗೆ ತಾನು ಮತ್ತೊಮ್ಮೆ ಮಾರುಹೋದಂತಾದುದು



ರಾಮನ್‌ಗೆ ಅಚ್ಚರಿಯುಂಟುಮಾಡಿತು.

"ಆಮೇಲೆ ತನ್ನ ಕಣ್ಣು ಕಾಣದಂತಾದುದರ ಅರಿವಾಗಿ ಆ ಹೆಬ್ಬು ಲಿಗೆ ಎಲ್ಲ ಜನರ ಮೇಲೆ ವಿಪರೀತ ಕೋಪ ಬಂದಿತು. ತನ್ನ ಪರ್ವತದ ಇಳಿಜಾರಿಗೆ ಯಾರೇ ಬಂದರೂ ಅವರನ್ನು ಹೊಡೆದುಹಾಕುವುದಾಗಿ ಹುಲಿ ಪ್ರತಿಜ್ಞೆ ಮಾಡಿತು. ಪ್ರತಿ ರಾತ್ರಿಯೂ ಅದು ತನ್ನನ್ನು ಅಂಧನಾಗಿ ಮಾಡಿದ ಪುರುಷನನ್ನು ಅರಸುತ್ತ ಇಳಿಜಾರುಗಳಲ್ಲಿ ಅಲೆದಾಡುತ್ತಿತ್ತು. ಈಗ ಮುಂಚಿನಷ್ಟು ಸುಲಭವಾಗಿ ಹುಲಿ ಕಾಡುಪ್ರಾಣಿಗಳ ಬೇಟೆಯಾಡಲೂ ಆಗು ತ್ತಿರಲಿಲ್ಲ. ಮುಂದಕ್ಕೆ ಹಾರಿದಾಗ ದೃಷ್ಟಿ ತಪ್ಪಿ ಬೇಟೆ ಕೈತಪ್ಪುತ್ತಿತ್ತು. ಮತ್ತೆ ಎದ್ದು ಬಿಗಿಯುವ ವೇಳೆಗೆ ಬೇಟೆಯ ಪ್ರಾಣಿ ತಪ್ಪಿಸಿಕೊಂಡು ಓಡಿರು ತ್ತಿತ್ತು. ಆಹಾರ ಸಾಲದೆ ಹಳದಿ ಕಣ್ಣಿನ ಹುಲಿ ಕೃಶವಾಗುತ್ತಬಂದು ತಟ್ಟೆಯ ಚರ್ಮದಿಂದ ಮೂಳೆಗಳು ಹೊರಕ್ಕೆ ಎದ್ದು ಕಾಣುತ್ತಿದ್ದವು, ವಿಧಿ ಯಿಲ್ಲದೆ ಸಣ್ಣಪುಟ್ಟ ಪ್ರಾಣಿಗಳಿಗಾಗಿ ಅದು ಹೊರವಲಯದ ಹಳ್ಳಿಗಳಿಗೆ ಹೋಗಬೇಕಾಗಿಬಂದಿತು. ಅದೂ ಅಪಾಯವೇ. ಏಕೆಂದರೆ ಆಗ ಬೇಟೆಗಾ ರರೂ ಅದನ್ನು ಹಿಡಿದು ಹಾಕುವ ಸಂಭವವಿತ್ತು.

"ಆದರೆ ದಿನಗಳುರುಳಿದಂತೆ ಹಳದಿ ಕಣ್ಣಿನ ಹುಲಿ ತನ್ನ ಒಂದು ಕಣ್ಣನ್ನೇ ಹೆಚ್ಚು ಖಚಿತವಾಗಿ ಬಳಸಲು ಕಲಿಯುತ್ತ ಬಂದಿತು. ಆದರೂ ಈಗ ಹಸಿವಿನ ಸಮಸ್ಯೆಯಿರದಿದ್ದರೂ. ಮನುಷ್ಯ ಜನಾಂಗದ ಮೇಲಿನ ಕೋಪ ಹಾಗೆಯೇ ಕಡಿಮೆಯಾಗದೆ ಉಳಿದಿತ್ತು. ಈವೊತ್ತಿಗೂ ಅದು "ಗಡ್ಡದ ಬೆಟ್ಟ"ದ ಇಳಿಜಾರುಗಳಲ್ಲಿ ಅಲೆದಾಡುತ್ತಿರುತ್ತದೆ. ಅಲ್ಲಿ ಹೋಗುವವರೆಲ್ಲಾ ಹುಷಾರಾಗಿರಬೇಕು. ತನ್ನ ರಾಜ್ಯಕ್ಕೆ ನುಗ್ಗಿ ಬಂದವರಾರಾದರೂ ಸರಿ ಅವರ ಮೇಲೆ ಬೀಳುತ್ತದೆ ಆ ಕೋಪೋದ್ರಿಕ್ತ ಹುಲಿ, ತನ್ನ ಕಣ್ಣು ಹೋದು ದಕ್ಕೆ ಸೇಡು ತೀರಿಸಿಕೊಳ್ಳುತ್ತದೆ."

ತಾತ ನಟೇಶನ್ನನ ದನಿ ನಿಂತಾಗ ಮೌನ ಮೂಡಿತು. ಬೆಂಕಿ ಸುಯ್ಯೆಂದು ಕಿಡಿಗಾರುತ್ತಿತ್ತು. ಅದೇ ಸಮಯದಲ್ಲಿ ತನ್ನ ಹಣೆ ಮೇಲೆ ತಣ್ಣನೆಯ ನೀರು ತೊಟ್ಟಿಕ್ಕಿದುದನ್ನು ಕಂಡ ರಾಮನ್. ತಾತ ನಟೇಶನ್ ಓರೆಗಣ್ಣಿ ನಿಂದ ಆಕಾಶದತ್ತ ನೋಡಿದ. "ಮಳೆ ಷುರುವಾಯಿತು" ಎಂದು ಆತ ಹೇಳಿದಾಗ ಮಕ್ಕಳಿಂದ ನಿರಾಶೆಯ ದನಿಗಳು ಹೊರಟವು. ಕಥೆ ಹೇಳುವುದು

ಅದೇತಾನೇ ಆರಂಭವಾಗಿತ್ತು. ತಾತ ನಟೇಶನ್ ತನ್ನ ದಪ್ಪನೆಯ ಕೋಲನ್ನು ಕೈಗೆತ್ತಿಕೊಂಡು ಅದರಿಂದ ಬೆಂಕಿಯನ್ನು ಕಲಕಿದ. ಹೊದಿಕೆಯನ್ನು ಇನ್ನಷ್ಟು ಚೆನ್ನಾಗಿ ಹೊದೆದುಕೊಂಡು ಕೋಲನ್ನು ಸೆಲಕ್ಕೂರಿ ತನ್ನ ಬಾಗಿದ. ತೆಳುವಾದ ದೇಹವನ್ನು ಮೇಲೆತ್ತಲು ಪ್ರಯತ್ನಿಸಿದ. ಇತರರಿಗೆ ಕಾಣದಂತಿರಬೇಕೆಂಬ ಇಷ್ಟೂ ಮರೆತು ರಾಮನ್ ಕೂಡಲೆ ಮುಂದಕ್ಕೆ ಜಿಗಿದು ತಾತನ ನೆರವಿಗೆ ಹೋದ, ಆದೆಷ್ಟು ಹಗುರ ಆತ !

ಮೇಲೆದ್ದು ನಿಂತಮೇಲೆ ತಾತ ನಟೇಶನ್ ರಾಮನ್‌ನತ್ತ ದಿಟ್ಟಿಸಿ "ಯಾರದು, ಸೆಲ್ವಂ ಏನು ?" ಎಂದ.

"ನಾನು ರಾಮನ್" ಹುಡುಗ ಉತ್ತರಿಸಿದ, "ಸೆಲ್ವಂ ನನ್ನ ತಂದೆ". ಎಷ್ಟೋ ವರ್ಷಗಳ ಹಿಂದೆ ಕಥೆಗಳನ್ನು ಕೇಳಲು ಬರುತ್ತಿದ್ದ ಹುಡುಗ ಸೆಲ್ವಂನನ್ನೇ ಇನ್ನೂ ನೋಡುತ್ತಿರುವನೋ ಎಂಬಂತೆ ತಾತ ನಟೇಶನ್ ಅವ ನನ್ನೇ ನೋಡುತ್ತ ನಿಂತ.

"ತಾತ ನಟೇಶನ್. ಈ ಬೆಟ್ಟಗಳ ವಿಷಯವೆಲ್ಲಾ ನಿಮಗೆ ಗೊತ್ತು. ಆರ್ಚಿಡ್ ಎಲ್ಲಿ ಸಿಗುತ್ತೆ ಗೊತ್ತೇ? ನೀವು ಅದನ್ನು ನೋಡಿಯೇ ಇರಬೇಕು"

"ಆರ್ಚಿಡ್ ?" ತಾತ ನಟೇಶನ್ ಪುನರುಚ್ಚರಿಸಿದ "ಆರ್ಚಿಡ್? ಅದೇನು ಪ್ರಾಣಿಯೇ ?"

ರಾಮನ್ ಅಸಹನೆಯಿಂದ "ಅಲ್ಲ, ಅಲ್ಲ ! ಅದೊಂದು ಹೂವು. ಚಿಟ್ಟೆಯಂತೆ ಕಾಣುವ ಹೂವು. ನಸುಗೆಂಪು. ಹಳದಿ ಅಥವಾ ಬಳಿಯಬಣ್ಣದ ಚಿಟ್ಟೆ ಒಂದು ರೆಂಬೆಯ ಮೇಲೆ ಕುಳಿತಿರುವಂತೆ ಕಾಣುವ ಹೂವು. ಅದಕ್ಕೆ ಉದ್ದನೆಯ ತೆಳುವಾದ ಎಲೆಗಳಿರುತ್ತವೆ. ಅದು ಇಲ್ಲೇ ಕಾಡಿನಲ್ಲಿ ಬೆಳೆಯು ವುದು"

"ಚಿಟ್ಟೆಗಳು" ತಾತ ನಟೇಶನ್ ಹೇಳಿದ "ಚಿಟ್ಟೆಗಳು ! ಆಂ— ಹೌದು ನನಗೆ ಗೊತ್ತು, ಕಾಡಿನಲ್ಲಿ ಗಡ್ಡದ ಬೆಟ್ಟದ ಕೊರಕಲುಗಳಲ್ಲಿರುವ ಮರಗಳಲ್ಲಿ ಅದು ಬೆಳೆಯುತ್ತದೆ.

ಗಡ್ಡದ ಬೆಟ್ಟ ! ಹಳದಿ ಕಣ್ಣಿನ ಹೆಬ್ಬುಲಿಯ ಭಯಾನಕ ರಾಜ್ಯ ವಾದ ಬೆಟ್ಟ !

"ನಿನಗೆ ನಿಜವಾಗಿ ಗೊತ್ತೇ ತಾತ ? ಅದು ಬೇರೆಲ್ಲೂ ಸಿಗದೇ ?"

ಬೆಟ್ಟಗಳ ಮೇಲೆ ಗುಡುಗಿನ ಸಪ್ಪಳ ಕೇಳಿ ಬಂದಿತ್ತು. ತಾತ ನಟೇಶನ್ ತಲೆ ಅಲ್ಲಾಡಿಸಿದ. "ಗಡ್ಡದ ಬೆಟ್ಟದ ಇಳಿಜಾರುಗಳಲ್ಲಿ ಕಣಿವೆಗಳಲ್ಲಿ, ಅಲ್ಲೇ ಅದು ಬೆಳೆಯುವುದು, ಸೆಲ್ವಂ" ಎಂದು ಹೇಳಿ ಮನೆಯೊಳಕ್ಕೆ ಹೋಗಲು ತಿರುಗಿದ. ಒಂದು ಬಾರಿ ಸಿಡಿಲು ಹೊಡೆದು ಅದರ ಬೆಳಕಿನಲ್ಲಿ ಆತನ ತಲೆಯಲ್ಲಿ ಉಳಿದಿದ್ದ ಕೆಲವೆ ಬಿಳಿಗೂದಲು, ಗುಳಿಬಿದ್ದ ಕೆನ್ನೆಗಳು ಕಪ್ಪನೆಯ ಗುಳಿಬಿದ್ದ ಕಣ್ಣುಗಳು ಕಾಣಿಸಿದವು. ಒಳಕ್ಕೆ ಹೋಗಿ ಬಾಗಿಲು ಹಾಕಿಕೊಂಡಂತೆ ಆತನ ಎತ್ತರದ ತೆಳುದನಿ ರಾಮನ್‌ಗೆ ಕೇಳಿಸಿತು. "ಚಿಟ್ಟೆಗಳು, ಸೆಲ್ವಂ.... ಗಡ್ಡದ ಬೆಟ್ಟಗಳ ಇಳಿಜಾರಿನಲ್ಲಿ"

ರಾಮನ್ ಹಿಂದಿರುಗಿ ಬೇಕಿಯಿದ್ದ ಜಾಗವನ್ನು ಹಾಯ್ದು ಹೋಗುವುದರಲ್ಲಿದ್ದಾಗ ಜೇಸುದಾಸನ್ ಎದುರಾದ.

ಆ ಹುಡುಗ ನೆಟ್ಟದೃಷ್ಟಿಯಿಂದ ರಾಮನ್‌ನನ್ನು ನೋಡುತ್ತಿದ್ದ. ಬರಲಿದ್ದ ಅಣಕದ ಮಾತುಗಳನ್ನೆದುರಿಸಲು ಗಟ್ಟಿಮಾಡಿಕೊಂಡು ಮುಷ್ಟಿಗಳನ್ನು ಬಿಗಿದು ತಲೆ ಎತ್ತಿ ನಡೆದು ಅಂಗಳವನ್ನು ದಾಟಿ ತನ್ನ ಮನೆಗೆ ಹೋಗುವ ದಾರಿ ಹಿಡಿದ. ಮೌನವಾವರಿಸಿತ್ತು. ರಾಮನ್ ಹತ್ತಿರ ಬಂದಾಗ ಜೇಸುದಾಸನ್ ಪಕ್ಕಕ್ಕೆ ತಿರುಗಿ ಕತ್ತಲೆಯಲ್ಲಿ ಕಾಣದಾದ.

ಸರಸರನೆ ರಾಮನ್ ಬೆಟ್ಟದಿಂದಿಳಿದು ತನ್ನ ಹಟ್ಟಿಯತ್ತ ನಡೆದ. ಕತ್ತಲೆಯಲ್ಲಿ ಹಾದಿ ಕಾಣದಿದ್ದರೂ ಅಭ್ಯಾಸ ಬಲದಿಂದ ಕಾಲುಹಾಕತೊಡಗಿದ. ಇಳಿಜಾರಿನ ತೇವಗೊಂಡ ಹುಲ್ಲು, ಕೊರಕಲಿನ ಥಣ್ಣನೆಯ ಗಟ್ಟಿ ನೆಲ, ತನ್ನ ಮನೆಯ ಸುತ್ತ ಇದ್ದ ಬೇಸಾಯ ಮಾಡಿದ ಮೆದುವಾದ ನೆಲ ಎಲ್ಲವನ್ನೂ ಹಾಯ್ದು ನಡೆದ. ಅವನು ಓಡುತ್ತಿದ್ದಂತೆ ಮಳೆ ಅವನ ಮುಖ, ಮೈ ಕೈಗಳಿಗೆ ಬಡಿಯುತ್ತಿತ್ತು. ಬೆಟ್ಟದಾಚೆ ಕೆರೆಯ ಕಡೆ ಭಾರೀ ಸಿಡಿಲು ಅಪ್ಪಳಿಸಿತು. ಮನೆಯೊಳಕ್ಕೆ ಪ್ರವೇಶಿಸುವುದರೊಳಗೆ ಮುಂಗಾರು ಮಳೆ ಭರದಿಂದ ಸುರಿಯಲಾರಂಭಿಸಿತು.

ಹರಿದಿದ್ದುದನ್ನು ಹೊಲೆದಿದ್ದ ಕಂಬಳಿಯಡಿ ಒಟ್ಟಿಗೆ ಮುದುಡಿಕೊಂಡು ದಾಸನ್. ವಾಸಂತಿ ಆಗಲೇ ನಿದ್ರೆಹೋಗಿದ್ದರು. ಅವರನ್ನು ಹಾಯ್ದು ರಾಮನ್ ಮುನ್ನಡೆದಾಗ ತಾಯಿಯ ಮೆಲುದನಿ ಕೇಳಿಸಿತು.

"ರಾಮನ್"

"ಏನಮ್ಮಾ ?"

"ಮಳೆಯಲ್ಲಿ ನೆನೆದುಹೋಗಿದ್ದೀ ಅಂತ ಕಾಣುತ್ತೆ. ಹೊದಿಕೆಯನ್ನು ಚೆನ್ನಾಗಿ ಹೊದೆದುಕೋ"

"ಆಗಲಿ, ಅಮ್ಮಾ" ರಾಮನ್ ತನ್ನ ಮೂಲೆ ಸೇರಿ ಹೊದಿಕೆಯನ್ನು ತೆಗೆದು ಭುಜದಮೇಲೆ ಹಾಕಿಕೊಂಡು ಕತ್ತಲಲ್ಲೇ ತನ್ನ ತಾಯಿಯ ಪಕ್ಕಕ್ಕೆ ತೆರಳಿದ.

"ಅಮ್ಮಾ"

"ಏನು ಮಗೂ ?"

"ನಾಳೆ ನಾನು ಬಹು ಬೇಗ ಹೊತ್ತು ಹುಟ್ಟುವುದಕ್ಕೆ ಮುಂಚೆಯೇ ಹೋಗಬೇಕು. ಮರ್ಕಿನಮ್ಮನಿಗೆ ಕೆಲವು ವಿಶೇಷವಾದ ಹೂಗಳು ಬೇಕಾಗಿದೆ. ಅವನ್ನು ಹುಡುಕಲು ನಾನು ಬಹು ದೂರ ಹೋಗಬೇಕು."

"ಅವು ಎಲ್ಲಿ ಬೆಳೆಯುತ್ತವೆ ?"

ರಾಮನ್ ಹೇಳಲು ಸ್ವಲ್ಪ ಹಿಂಜರಿದು ಆಮೇಲೆ ನಿಧಾನವಾಗಿ ಹೇಳಿದ. "ನನಗೆ ಸರಿಯಾಗಿ ಗೊತ್ತಿಲ್ಲ. ಆದರೆ ಕಾಡಿನಲ್ಲಿ ಗುಡ್ಡದ ಬೆಟ್ಟಕ್ಕೆ ಹೋಗುವ ಕಡೆ ಬೆಳೆಯುತ್ತವೆಂದು ತಾತ ನಟೇಶನ್ ಹೇಳುತ್ತಾನೆ." ಗಡ್ಡದ ಬೆಟ್ಟದ ಇಳಿಜಾರೆಂದು ಅವನು ತಿಳಿಸಲಿಲ್ಲ. ಹಾಗೆ ಹೇಳಿದರೆ ತಾಯ ಮನಸ್ಸಿಗೆ ಏನು ಯೋಚನೆ ಬರುವುದೆಂದು ಅವನು ಬಲ್ಲ.

"ಅಪಾಯವೇನೂ ಇಲ್ಲ, ಅಮ್ಮಾ" ಕೂಡಲೆ ಅವನು ತಾಯಿಗೆ ಭರವಸೆಯಿತ್ತ, "ದಾರಿಯನ್ನು ಸರಿಯಾಗಿ ಗುರುತಿಟ್ಟುಕೊಂಡು ಹೋಗುತ್ತೇನೆ. ಮಧ್ಯಾಹ್ನ ಹನ್ನೆರಡು ಗಂಟೆಯ ಹೊತ್ತಿಗೆ ಹೂಗಳು ಸಿಗದಿದ್ದರೆ ಹಿಂದಿರುಗಿ ಸಂಜೆಯ ಹೊತ್ತಿಗೆ ಮನೆ ಸೇರುತ್ತೇನೆ. ಅದೇನೇ ಇರಲಿ," ತಾಯಿಯ ಯೋಚನೆಯೇನೆಂಬುದನ್ನು ಅರಿತು ಹೇಳಿದ. "ಹಳದಿ ಕಣ್ಣಿನ ಹೆಬ್ಬುಲಿ ಕಥೆ ಕಥೆಯಷ್ಟೇ. ಹಾಗೆಂದು ಶಾಲಾಮಾಸ್ತರು ಮುನಿಸ್ವಾಮಿ ಹೇಳುತ್ತಾರೆ. ಅಷ್ಟೊಂದು ಹೆಚ್ಚು ಕಾಲ ಯಾವ ಹುಲಿಯೂ, ಅದರಲ್ಲೂ ಒಂದೇ ಕಣ್ಣಿನ ಹುಲಿ, ಬದುಕಿರಲಾರದು. ಅದೂ ಅಲ್ಲದೆ ಈ ಭಾಗದಲ್ಲಿ ಒಂದು ಹುಲಿ ಕಣ್ಣಿಗೆ ಬಿದ್ದೇ ಎಷ್ಟೋ ವರ್ಷ ಆಯಿತು" ಧೈರ್ಯವಾದ ಖಚಿತ ದನಿಯಲ್ಲಿ ಹೇಳಲು ಅವನು ಉದ್ದೇಶಿಸಿದ್ದ; ಆದರೆ ಅದರ ಲಕ್ಷಣ ಕಂಡು ಅವ

ನಿಗೆ ಆಶ್ಚರ್ಯವಾಯಿತು. ಕೂಡಲೇ ಅವನೆಂದ; "ಮರ್ಕಿನಮ್ಮ ಅದಕ್ಕೆ ತುಂಬಾ ದುಡ್ಡು ಕೊಡುತ್ತಾಳೆ; ಒಂದು ಹೂವು ತಂದರೆ ಮೂರು ರೂಪಾಯಿ ಕೊಡುತ್ತಾಳೆ."

"ಮೂರು ರೂಪಾಯಿ!" ತಾಯಿ ಕ್ಷಣಕಾಲ ಸುಮ್ಮನಿದ್ದಳು. ಆಮೇಲೆ "ಉಹೂಂ, ಅದೇಕೋ ಇದು ನನಗೆ ಹಿಡಿಸದು. ನೀನು ಅದಕ್ಕೆ ತುಂಬಾ ದೂರ ಹೋಗಬೇಕು."

"ಅಪಾಯವೇನೂ ಇಲ್ಲ, ಅಮ್ಮಾ" ರಾಮುನ್ ಪ್ರತಿಪಾದಿಸಿದ. "ಹಗಲು ಹೊತ್ತು, ಅಮ್ಮಾ, ಆ ಮುದುಕನ ಕಥೆಗಳನ್ನು ಕೇಳಿ ಹೆದರಿಕೋಬೇಡ. ಇನ್ನೂ ಬಹಳ ಹೆಚ್ಚಿಗೆ ತಿಳಿದಿರುವ ಶಾಲಾಮಾಸ್ತರು ಮುನಿಸ್ವಾಮಿ ಕೂಡಾ ಹಳದಿ ಕಣ್ಣಿನ ಹುಲಿ ಇಲ್ಲವೇ ಇಲ್ಲವೆಂದು ಹೇಳುತ್ತಾರೆ. ಹೆದರಲಿಕ್ಕೆ ಕಾರಣವಿಲ್ಲ."

"ಅದೇನೋ ನನಗೆ ಹಿಡಿಸದು." ತಾಯಿ ಮತ್ತೆ ಹೇಳಿದಳು; ಆಕೆಯ ದನಿಯಲ್ಲಿದ್ದ ಅನಿಶ್ಚಯತೆಯನ್ನು ರಾಮುನ್ ಗ್ರಹಿಸಿದ.

"ಅಪ್ಪ ಕೂಡಾ ಇದಕ್ಕೆ ಖಂಡಿತ ಒಪ್ಪುವರೆಂದು ನನಗೆ ನಂಬಿಕೆಯಿದೆ," ರಾಮುನ್ ಹೇಳಿದ, "ಶಾಲಾಮಾಸ್ತರು ಮುನಿಸ್ವಾಮಿ ಹೇಳುವುದೇ ಸರಿಯಿರಬಹುದೆಂದು ಅಪ್ಪನೇ ಹೇಳಿದ". ಕೂಡಲೇ "ಬಹುದು" ಎಂದು ಹೇಳಬಾರದಾಗಿತ್ತು ಎಂದುಕೊಂಡ. ಅದರಿಂದ ವಾದದ ಬಿಗಿ ಕಡಿಮೆಯಾದಂತಿತ್ತು. ಆದರೂ ತನ್ನ ತಂದೆ "ಇರಬಹುದು" ಎಂದೇ ಹೇಳಿದ್ದ, "ಕಳೆದ ಸಲ ಗಡ್ಡದ ಬೆಟ್ಟದ ತುದಿಯವರೆಗೂ ಹತ್ತಿಹೋಗಿದ್ದ ಜನರ ತಂಡವೊಂದನ್ನು ನಾನೇ ನೋಡಿದ್ದೆ" ಕಡೆಯ ಮಾತಾಗಿ ಹೇಳಿದ, "ಹಳದಿ ಕಣ್ಣಿನ ಹುಲಿಯ ಕಥೆ ನಿಜವಾದಲ್ಲಿ ಅವರು ಹಾಗೆ ಮಾಡಲು ಸಾಧ್ಯವಾಗುತ್ತಿತ್ತೇ ?"

"ಒಳ್ಳೇದು" ತಾಯಿ ಕೊನೆಗೆ ಹೇಳಿದಳು. "ಆ ಮೂಲೆಯಲ್ಲಿ ಬಾಳೆ ಎಲೆಯಲ್ಲಿ ಸ್ವಲ್ಪ ಅನ್ನ ಸುತ್ತಿಟ್ಟಿದ್ದೇನೆ. ಹೋಗುವಾಗ ಅದನ್ನು ತೆಗೆದುಕೊಂಡು ಹೋಗು. ಬೆಳಿಗ್ಗೆ ಊಟಕ್ಕೆ ಹೊಸದಾಗಿ ಅನ್ನ ಮಾಡುತ್ತೇನೆ. ಆದರೆ ನಿನ್ನ ಮಾತು ನೆನಪಿಟ್ಟುಕೋ ಮಧ್ಯಾಹ್ನ ಹನ್ನೆರಡರ ಹೊತ್ತಿಗೆ ಮನೆಗೆ ವಾಪಸು ಹೊರಡಬೇಕು. ಹೂ ಸಿಗದಿದ್ದರೂ ಅಷ್ಟೇ. ಇಲ್ಲದಿದ್ದರೆ ನನಗೆ ಯೋಚನೆಯಾಗುವುದು."

"ಆಗಲಿ ಅಮ್ಮಾ; ಇನ್ನು ಮಲಗಿಕೊಳ್ಳುತ್ತೇನೆ."

ಕತ್ತಲಲ್ಲೇ ತಡವರಿಸುತ್ತ ತನ್ನ ಮೂಲೆಗೆ ನಡೆದು ತಾಳೆಯ ಚಾಪೆಯನ್ನು ಹರವಿ ಮಲಗಿದ. ಆದರೆ ನಿದ್ರೆ ಬರಲಿಲ್ಲ. ಚಾಪೆಯ ಮೇಲೆ ಟಪ ಟಪನೆ ಬಡಿಯುತ್ತಿದ್ದ ಮಳೆಯ ದನಿಯನ್ನು ಮೀರಿಸಿ ತನ್ನ ಎದೆ ಬಡಿದುಕೊ ಳ್ಳುತ್ತಿದ್ದುದು ಅನುಭವಕ್ಕೆ ಬಂದಿತು.ಚಳಿಯ ರಾತ್ರಿಯಲ್ಲಿ ತನ್ನ ಯೋಚನೆಗಳು ತಲೆಯ ಸುತ್ತ ಆವರಿಸತೊಡಗಿದವು; ಕೊನೆಗೆ ತಲೆಯ ಮೇಲೆ ಅವು ಕತ್ತಲಲ್ಲಿ ಅಸ್ಪಷ್ಟವಾಗಿ ರೂಪುಗೊಳ್ಳುತ್ತಿದ್ದುದು ಕಂಡಂತೆ ಭಾಸವಾಯಿತು.

ನಾಳೆ ಅವನು ಗಡ್ಡದ ಬೆಟ್ಟಕ್ಕೆ ಭಯಂಕರವಾದ ಹಳದಿ ಕಣ್ಣಿನ ಹುಲಿಯ ರಾಜ್ಯಕ್ಕೆ ಹೋಗುತಾನೆ. ಹಳದಿ ಕಣ್ಣಿನ ಹುಲಿ ಬರೀ ಕಥೆ ಅಷ್ಟೇ. ಹೆದ ರಲು ಕಾರಣವಿಲ್ಲ........ಆದರೆ ಒಂದು ವೇಳೆ ಮಾಸ್ತರು ಮುನಿಸ್ವಾಮಿಯೇ ತಪ್ಪಾಗಿದ್ದರೆ ? ತನ್ನ ಕಣ್ಣು ಕುರುಡಾಗಿಸಿದವನ ಮೇಲೆ ಸೇಡು ತೀರಿಸಿಕೊ ಳ್ಳಲು ಹಳದಿ ಕಣ್ಣಿನ ಹುಲಿ ಬೆಟ್ಟದ ಇಳಿಜಾರುಗಳಲ್ಲಿ ಅಲೆದಾಡುತ್ತಿರುವುದೇ ನಿಜವಾದರೆ? ಆದರೆ ಮುನಿಸ್ವಾಮಿ ತಿಳಿವಳಿಕೆ ತಪ್ಪಿರಲಾರದು-ಎಂದು ರಾಮನ್ ತನಗೆ ತಾನೇ ಹೇಳಿಕೊಂಡ. ಮಾಸ್ತರು ಮುನಿಸ್ವಾಮಿಗೆ ಗೊತ್ತು; ಆರ್ಚಿಡ್ ಎಲ್ಲಿ ಸಿಗುತ್ತದೆಂಬುದು ಅವನಿಗೆ ತಿಳಿಯದು, ಏಕೆಂದರೆ ಅವರು ಈ ಬೆಟ್ಟದ ಪ್ರದೇಶದವರಲ್ಲ. ಆದರೆ ಹಳದಿ ಕಣ್ಣಿನ ಹುಲಿ ಕೇವಲ ಕಟ್ಟು ಕಥೆಯೆಂದು ಮುನಿಸ್ವಾಮಿಗೆ ಗೊತ್ತು. ಏಕೆಂದರೆ–ಹೌದು, ಅದು ನಿಜವಾಗಿರಲು ಸಾಧ್ಯವಿ ಲ್ಲದಂಥ ಕಥೆ ಅಷ್ಟೇ. ಅಪ್ಪನೂ ಹಾಗೆಯೇ ಹೇಳುತ್ತಾನೆ. ಶಾಲಾಮಾಸ್ತರು ಮುನಿಸ್ವಾಮಿ ಹೇಳುವುದು ಸರಿಯೆಂದು ಅಪ್ಪ ಹೇಳುತ್ತಾನೆ. "ಪ್ರಾಯಶಃ ಸರಿ ಯಿರಬಹುದು."

ರಾಮನ್‌ಗೆ ದಾರಿ ತಪ್ಪುವ ಹೆದರಿಕೆಯಿರಲಿಲ್ಲ. ನಿಜ. ಆ ಎತ್ತರದ ಬೆಟ್ಟದ ಕಡೆ ಅವನು ಎಂದೂ ಹೋಗಿದ್ದಿಲ್ಲ. ಆದರೆ ದಾರಿ ಪತ್ತೆಹಚ್ಚಿ ಅವನ್ನು ಗುರುತಿಟ್ಟುಕೊಂಡು ಮತ್ತೆ ಅದೇ ಹಾದಿಯಲ್ಲಿ ಹಿಂದಿರುಗುವುದು ಹೇಗೆಂದು ಅವನು ತಿಳಿದಿದ್ದ. ಆ ಬಗ್ಗೆ ಆತಂಕ ಅಗತ್ಯವಿಲ್ಲ.

ಅಲ್ಲ. ಅವನ ನಿದ್ರೆಗೆ ಅಡ್ಡಿಯಾಗಿದ್ದುದು ದಾರಿ ತಪ್ಪುವ ಹೆದರಿಕೆಯಲ್ಲ. ಅದಕ್ಕೆ ಕಾರಣ ತಾತ ನಟೇಶನ್‌ನ ಧ್ವನಿಯ ಮಾರ್ದನಿ "....ಈವೊತ್ತಿಗೂ ಹಳದಿ ಕಣ್ಣಿನ ಹುಲಿ ಗಡ್ಡದ ಬೆಟ್ಟದ ಇಳಿಜಾರುಗಳಲ್ಲಿ ಅಲೆದಾಡುತ್ತಿರುತ್ತದೆ- ಅಲ್ಲಿಗೆ ಹೋಗುವವರೆಲ್ಲಾ ಹುಷಾರಾಗಿರಬೇಕು........ಗಡ್ಡದ ಬೆಟ್ಟದ ಇಳಿ

ಜಾರುಗಳು....ಬಣ್ಣದ ಚಿಟ್ಟೆಗಳು....ಗಡ್ಡದ ಬೆಟ್ಟದ ಇಳಿಜಾರುಗಳಲ್ಲಿ........

"ಒಬ್ಬ ಮುದುಕನ ಕಥೆಗಳಿಂದ ನಾನು ಹೆದರಿಕೊಂಡುಬಿಡುವುದಿಲ್ಲ." ಕತ್ತಲಲ್ಲಿ ರಾಮನ್ ತನ್ನಲ್ಲೇ ಹೇಳಿಕೊಂಡ. "ನಾನು ಶಾಲೆಗೆ ಹೋಗುವ ಮುಂಚಿನಿಂದಲೂ ಈ ಕಥೆಗಳನ್ನು ನಂಬಿಲ್ಲ. ನಾನು ಹೆದರಿಕೊಳ್ಳುವುದಿಲ್ಲ"

ಹಳದಿ ಕಣ್ಣಿನ ಹುಲಿಯ ಚಿತ್ರದಿಂದ ಮನವನ್ನು ವಿಮುಖವಾಗಿಸಲು ಅವನು ತಂಬುಸ್ವಾಮಿಯ ಅಂಗಡಿಯ ಗಾಜಿನ ಬೀರುವಿನಲ್ಲಿರುವ ಆ ದೊಡ್ಡ ಪುಸ್ತಕದ ಬಗ್ಗೆ, ಚಿನ್ನದ ಅಕ್ಷರಗಳ ಹೆಸರಿನ ಆ ಪುಸ್ತಕದಲ್ಲಿರುವ ಕಥೆಗಳ ಬಗ್ಗೆ ಯೋಚಿಸ ತೊಡಗಿದ. ಕೊನೆಗೆ ನಿದ್ರೆಯಿಂದ ಕಣ್ಣುಗಳು ಭಾರವಾದವು. ಚಾವಣಿಯಿಂದ ತೊಟ್ಟಿಕ್ಕುತ್ತಿದ್ದ ಮಳೆ ನೀರು ಮೇಲೆ ಬೀಳದಿರಲೆಂದು ಅವನು ಪಕ್ಕಕ್ಕೆ ಹೊರಳಿ ಹೊದಿಕೆಯನ್ನು ಬಿಗಿಯಾಗಿ ಹೊದೆದುಕೊಂಡ. ಕೆಲಕ್ಷಣಗಳಲ್ಲೇ ಅವನು ನಿದ್ರೆಹೋದ.

# ೧೩

ಮಳೆ ನಿಂತಿತ್ತು. ಚಾವಣಿಯ ಬಳಿ ಗೋಡೆಯ ಮೇಲಿದ್ದ ಸಣ್ಣ ಕಿಂಡಿಯಿಂದ ರಾಮನ್ ಹೊರಗಡೆ ರಾತ್ರಿಯ ಕತ್ತಲೆ ಕಳೆದಿದ್ದರೂ ಅರುಣೋದಯದ ಬೆಳಕಿನ್ನೂ ಮೂಡದೆ ಆಕಾಶವು ಬುಲ್ ಬುಲ್ ಪಕ್ಷಿಯ ರೆಕ್ಕೆಗಳಂತೆ ತಿಳಿ ಬೂದು ಬಣ್ಣಕ್ಕೆ ತಿರುಗಿದ್ದನ್ನು ಕಂಡ. ಲಗುಬಗನೆ ಹೊದಿಕೆ ಸರಿಸಿ ಎದ್ದಾಗ ಥಂಡಿಗೆ ನಡುಗಿದ, ಮಣ್ಣಿನ ನೆಲದ ಮೇಲೆ ಅವನ ನಡಿಗೆಯ ಸಪ್ಪಳವಾಗಲಿಲ್ಲ. ತಡವರಿಸುತ್ತ ಅವನು ಮೂಲೆಗೆ ಹೋಗಿ ಎಲೆಯಲ್ಲಿ ಕಟ್ಟಿಟ್ಟಿದ್ದ ಅನ್ನ ಕೈಗೆತ್ತಿಕೊಂಡು ಬಾಗಿಲತ್ತ ನಡೆದ.

ಅವನು ಹಾದು ಹೋಗುತ್ತಿದ್ದಂತೆ ವಾಸಂತಿ ನಿದ್ರೆಯಲ್ಲಿ ಹೊರಳಾಡಿ ಹೊದಿಕೆಯನ್ನು ಇನ್ನೂ ಚೆನ್ನಾಗಿ ಹೊದೆದುಕೊಂಡಳು. ಆದರೆ ಹರಿದಿದ್ದ ಭಾಗದ ಹೊಲಿಗೆ ಮತ್ತೆ ಕಿತ್ತು ಅವಳ ಕಾಲು ಹೊರಗಡೆ ಕಾಣುತ್ತಿತ್ತು; ಕಂಬಳಿಯ ಒಂದು ಅಂಚು ದಾಸನ್‌ನ ಅಡಿಯಿದ್ದುದರಿಂದ ಅದನ್ನು ಅವಳು ಎಳೆದುಕೊಳ್ಳಲು ಆಗುತ್ತಿರಲಿಲ್ಲ. ರಾಮನ್ ಕ್ಷಣಕಾಲ ನಿಂತ; ಅವಳು ಎಚ್ಚರಗೊಳ್ಳುವುದು ಅವನಿಗೆ ಬೇಕಾಗಿರಲಿಲ್ಲ. ಅವಳು ನೋಡಿದರೆ ತಾನು ಇಷ್ಟುಹೊತ್ತಿಗೇ ಎದ್ದುದನ್ನು ಕಂಡು ಪ್ರಶ್ನಿಸುವಳು; ಅವಳ ಪ್ರಶ್ನೆಗಳಿಗೆ ಉತ್ತರಿಸಲು ಅವನು ಸಿದ್ಧನಿರಲಿಲ್ಲ. ಆಮೇಲೆ ರಾಮನ್ ತಾನು ಮೂಲೆಗೆ ಹೋಗಿ ತನ್ನ ಹೊದಿಕೆಯನ್ನು ತಂದು ವಾಸಂತಿ ಮತ್ತು ದಾಸನ್‌ಗೆ ಹೊದಿಸಿ ವಾಸಂತಿಯ ಕಾಲೂ ಹೊದಿಕೆಯೊಳಗಿರುವಂತೆ ನೋಡಿ ಸರಸರನೆ ಹೊರಟು ಬಾಗಿಲ ಚಿಲಕ ತೆಗೆದು ಹೊರಗಡೆ ಅಡಿಯಿಟ್ಟ.

ಅವನ ಕರಣೆಯಿಟ್ಟಿದ್ದ ಬುಟ್ಟಿ ಮನೆಯ ಗೋಡೆಗೆ ಒರಗಿಸಿಡಲಾಗಿತ್ತು. ಬುಟ್ಟಿಗೆ ಬಿಗಿಸಿದ್ದ ಹಗ್ಗವನ್ನು ಭುಜದಿಂದ ಇಳಿಬಿಟ್ಟು ಅನ್ನದ ಪೊಟ್ಟಣವನ್ನು ಬುಟ್ಟಿಯಲ್ಲಿಟ್ಟು ಕಡಿದಾದ ದಿಣ್ಣೆಯನ್ನೇರಿ ರಸ್ತೆಗೆ ಬಂದ.

ಬೆಳಗ್ಗೆ ಥಂಡಿಯ ಹವೆಯಿತ್ತು. ಆದರೆ ಬೂದು ಬಣ್ಣದ ಆಕಾಶ ನಿರ್ಮಲವಾಗಿದ್ದು ಆಗಲೆ ಪೂರ್ವದಿಕ್ಕಿನ ಬೆಟ್ಟಗಳ ಕಡೆ ಕಿತ್ತಳೆ ಬಣ್ಣದ ಬಿಸಿಲು ಮೂಡುತ್ತಿತ್ತು. ರಾಮನ್ ಕೆಳ ತುಟಿಯನ್ನು ಮುಂದಕ್ಕೆ ಚಾಚಿ ಜೋರಾಗಿ ಉಸಿರು ಬಿಟ್ಟ; ಆ ಬಿಸಿಯುಸಿರು ಅವನ ಮೂಗು–ಕೆನ್ನೆಗಳಿಗೆ ತಾಗಿತು. ಸ್ವಲ್ಪ ಮಟ್ಟಿಗೆ ಅವಸರ ಜತೆಗೆ ತೇವದ ನೆಲದ ಥಂಡಿ ತಪ್ಪಿಸಿಕೊಳ್ಳಲು ಅವನು ಬೇಗ ಬೇಗ ನಡೆದ. ಕೆಳಗಡೆಗೆ ಸಾಗಿ ಕೆರೆಯ ದಂಡೆಯ ಮೇಲಿದ್ದ ಹಾದಿ ಸೇರುವ ಮಾರ್ಗದಲ್ಲಿ ಅವನು ಮುನ್ನಡೆದ. ಗೋಂದಿನ ಮರಗಳ ಎಲೆಗಳಿಂದ ದಪ್ಪ ನೆಯ ನೀರಿನ ಹನಿಗಳು ಕೆಳಕ್ಕುದುರಿ ಕಾಲುದಾರಿಯ ಮೇಲೆ ಬೀಳುತ್ತಿದ್ದವು.

ಕೆರೆಯಲ್ಲಿ ನೀರು ಕಪ್ಪಗೆ ನಿಶ್ಚಲವಾಗಿತ್ತು. ನೀರಮೇಲಿನ ಜೊಂಡುಗಳ ನಡುವಣಿಂದ ಹಿಮ ಮೇಲೇರುತ್ತಿತ್ತು. ಕಪ್ಪೆಗಳು ವಟಗುಟ್ಟುವುದು ನಿಂತಿತ್ತು. ನೀರಿನ 'ಲಿಲಿ' ಹೂಗಳು ಇನ್ನೂ ಮುಚ್ಚಿಕೊಂಡು ಮೊಗ್ಗುಗಳಾಗಿಯೇ ಇದ್ದವು; ಸೂರ್ಯಕಿರಣಗಳು ಬಿದ್ದೇ ಅವು ಅರಳಬೇಕು. ಒಂದು ಹೂಪೋ ಹಕ್ಕಿ ಕೆರೆಯ ಪಕ್ಕದಲ್ಲಿ ತನ್ನ ಕುಡುಗೋಲು ಮಾದರಿಯ ಕೊಕ್ಕಿನಿಂದ ಹುಳುಹುಪ್ಪಟೆ ಹುಡುಕುತ್ತಿತ್ತು; ಅದರ ನೆತ್ತಿಯ ಕಪ್ಪು–ಬಿಳಿ ಕುಚ್ಚು ತಲೆಗೆ ಅಂಟಿಕೊಂಡಿತ್ತು. ರಾಮನ್ ಸಮೀಪಿಸಿದಾಗ ಈ ಹಕ್ಕಿ ರೆಕ್ಕೆ ಬಡಿಯುತ್ತ ಹಾರಿಹೋಗಿ ಸಮೀಪದ ತೋಟದ ಮರವೊಂದರ ಮೇಲೆ ಕುಳಿತಿತು; ಉದ್ರೇಕದಿಂದ ತಲೆ ಕುಚ್ಚು ನಿಮಿರಿನಿಂತಿದ್ದ ಆ ಹಕ್ಕಿ "ಹೂ ಪೂ,ಪೂ,!" ಎಂದು ವಿಚಿತ್ರವಾಗಿ ಕೂಗುತ್ತಿತ್ತು.

ಈ ಹೊತ್ತಿನಲ್ಲಿ ಆ ಪ್ರದೇಶದಲ್ಲಿದ್ದುದು ರಾಮನ್ ಒಬ್ಬನೇನಲ್ಲ, ತಲೆ ಮೇಲೆ ಕಟ್ಟಿಗೆ ಹೊರೆಗಳನ್ನು ಹೊತ್ತು ಜನ ಆಗಲೇ ಅಂಗಡಿ ಬೀದಿಗೆ ಹೊರಟ್ಟಿದ್ದರು. ಕೆರೆಯಿಂದ ಕೆಳಕ್ಕೆ ಹರಿಯುತ್ತಿದ್ದ ತೊರೆಯ ಬಳಿ ಒಗೆಯಲು ಬಟ್ಟೆಗಳನ್ನು ಹೇಸರಕತ್ತೆಯ ಮೇಲೆ ಹೇರಿಕೊಂಡು ಒಬ್ಬ ಅಗಸ ಹೊರಟಿದ್ದ. ಆಮೇಲೆ ತನ್ನ ಗಾಜಿನ ಬೀರುವಿದ್ದ ಗಾಡಿ ತಳ್ಳಿಕೊಂಡು ಮಿಠಾಯಿ ಮಾರುವ ಸುಪ್ಪನ್ ಅದೇ ಹಾದಿಯಲ್ಲಿ ಬಂದ, ಅವನು ಅಂಗಡಿ ಬೀದಿ ಮೇಲುಗಡೆ ಮೂಲೆಯಲ್ಲಿ ಅಂಗಡಿಯಿಟ್ಟು, ಬಿಸಿಯಾದ ಬೋಂಡ ಅಥವಾ ಉಪ್ಪಿಟ್ಟನ್ನು ಗಾಡಿಯ ಕೆಳಭಾಗದ ಮಾಡದಲ್ಲಿಟ್ಟಿರುವ ಸೀಮೆಯೆಣ್ಣೆ ಒಲೆಯಲ್ಲಿ ತಯಾರಿಸಿ ಮಾರುತ್ತಾನೆ; ಮೈಸೂರುಪಾಕ್ ಬಿಲ್ಲೆಗಳು ಮತ್ತು ಪಾಯಸ ಕೂಡಾ ಮಾಡುತ್ತಾನೆ.

"ಏನು, ರಾಮನ್, ಈ ಹೊತ್ತು ಬೇಗ ಎದ್ದು ಹೊರಟಿದ್ದೀ" ಎಂದ ಸುಪ್ಪನ್.

"ಬೇಟೆಗೆ ಹೊರಟಿದ್ದೀನಿ" ಎಂದು ರಾಮನ್ ಉತ್ತರಿಸಿದ, ಯಾವುದರ



ಬೇಟೆಗೆಂದು ಅವನು ಹೇಳಲೂ ಇಲ್ಲ, ಇದೆಲ್ಲಾ ದೊಡ್ಡ ತಮಾಷೆಯೆಂದು ಭಾವಿಸಿದ್ದ ಸುಪ್ಪನ್ ಕೇಳಲೂ ಇಲ್ಲ.

"ನಿನ್ನಂಥ ದೊಡ್ಡ ಬೇಟೆಗಾರನಿಗೆ ಬಲವಿರಲು ಆಹಾರ ಬೇಕು. ಇದೋ, ನಿನ್ನೆ ಮಾಡಿ ಉಳಿದಿದ್ದ ಕೆಲವು ಬೋಂಡಾಗಳಿವೆ. ಬಿಸಿಯಾಗದಿದ್ದರೂ ಕೆಡದೆ ಚೆನ್ನಾಗಿವೆ. ಬೇಟೆಗೆ ಹೋಗುತ್ತ ಇದನ್ನು ತೆಗೆದುಕೊಂಡುಹೋಗು" ಎಂದು ಸುಪ್ಪನ್ ಗಾಡಿ ನಿಲ್ಲಿಸಿ ಬೋಂಡಾಗಳನ್ನೂ, ಕೊನೆಯಲ್ಲಿ ಎರಡು ಬಿಲ್ಲೆ ಮೈಸೂರು ಪಾಕನ್ನೂ ಬಾಳೆಯೆಲೆಯಲ್ಲಿ ಕಟ್ಟಿ ರಾಮನ್‌ನ ಕೈಗಿತ್ತ.

"ಬಹಳ ಉಪಕಾರವಾಯಿತಣ್ಣಾ" ಎಂದು ರಾಮನ್ ಆ ಪೊಟ್ಟಣವನ್ನು ಬುಟ್ಟಿಯಲ್ಲಿಟ್ಟುಕೊಂಡ.

"ಅಂಥದೇನೂ ಇಲ್ಲ ಬಿಡು, ಬೇಟೆಯಲ್ಲಿ ನಿನಗೆ ಯಶಸ್ಸು ಸಿಗಲಿ. ಬರುತ್ತಾ ಒಂದು ಆನೆ ತೆಗೆದುಕೊಂಡು ಬಾ!" ಎಂದು ಸುಪ್ಪನ್ ತನ್ನ ವಿನೋದಕ್ಕೆ ತಾನೇ ಜೋರಾಗಿ ನಕ್ಕು ಗಾಡಿಯನ್ನು ತಳ್ಳಿಕೊಂಡು ಮುನ್ನಡೆದ.

ರಾಮನ್ ಬೋಂಡಾಗಳನ್ನು ಹೊರತೆಗೆದು ಅವನ್ನು ತಿನ್ನುತ್ತ ನಡೆದ, ಬೇಯಿಸಿದ ಆಲೂಗಡ್ಡೆ, ಈರುಳ್ಳಿ, ಹಸಿರುಮೆಣಸಿನಕಾಯಿ ಸೇರಿಸಿ ಕಡಲೆ ಹಿಟ್ಟಿನಲ್ಲಿ ಕಲಸಿ ಅದನ್ನು ಗರಿಗರಿಯಾಗಿ ಎಣ್ಣೆಯಲ್ಲಿ ಕರೆದು ಬೋಂಡ ತಯಾರಿಸಲಾಗಿತ್ತು. ಚಳಿಯಿದ್ದ ಬೆಳಗ್ಗೆ ಮೆಣಸಿನ ಖಾರ ಹಿತವಾಗಿತ್ತು. ಮೈಸೂರು ಪಾಕನ್ನೂ ತಿಂದು ಬಿಡುವುದೇ ಎಂದು ರಾಮನ್ ಕ್ಷಣಕಾಲ ಯೋಚಿಸಿದ. ಆದರೆ ಬೇಡವೆಂದು ಅದನ್ನು ಆಮೇಲೆ ಅನ್ನದ ಜತೆತಿನ್ನಲು ಹಾಗೆಯೇ ಇಟ್ಟ. ಅಂದು ನಿಜವಾಗಿ ಆರೋಗಣೆಯೇ! ಸುಪ್ಪನ್‌ನ ಗಾಡಿಯಲ್ಲಿದ್ದ ಆ ಮೈಸೂರು ಪಾಕನ್ನು ಅದೆಷ್ಟು ಸಲ ಅವನು ಆಸೆಯಿಂದ ನೋಡಿದ್ದ!

ಕೊನೆಗೆ ಅವನು ಕೆರೆಯಾಚೆ ಕಡೆಗಿದ್ದ ಬೆಟ್ಟದ ಶಿಖರ ತಲಪಿದಾಗ ಮುಂದುಗಡೆಗೆ ದೃಷ್ಟಿಹಾಯಿಸಿ ನೋಡಿದ. ಎತ್ತರದ ಬೆಟ್ಟದ ತುದಿಗಳೆಲ್ಲಾ ಈಗ ಬಿಸಿಲಿನಿಂದ ಆವೃತವಾಗಿದ್ದವು; ಆದರೆ ಕೆಳಗಡೆ ಕಣಿವೆಗಳಲ್ಲಿ ಇನ್ನೂ ನಸುಗತ್ತಲೆ, ನೆರಳು ಕಂಡು ಬಂದವು. ಅವನ ಮುಂದುಗಡೆ ಇಳಿಜಾರುಗಳಲ್ಲಿ ಪೈನ್ ತೋಪುಗಳಾಗಲಿ. ಹಣ್ಣಿನ ತೋಟಗಳಾಗಲಿ, ನೀಲಿಗೋಂದಿನ ಮರಗಳಾಗಲಿ ಇರಲಿಲ್ಲ. ಅಲ್ಲಿ ಬರೀ ಲಾಂಟಾನಾ ದಟ್ಟವಾಗಿ ಬೆಳೆದಿತ್ತು ; ಮಧ್ಯೆ ಮಧ್ಯೆ 'ಪ್ಯಾಷನ್' ಹಣ್ಣಿನ ಬಳ್ಳಿಗಳು, ಕೆಳಗಡೆ ಕಣಿವೆಯ ತಳದಲ್ಲಿ ಕಾಡುಮರ–ಸಸ್ಯ

ಗಳು ದಟ್ಟವಾಗಿ ವ್ಯಾಪಿಸಿದ್ದವು. ರಾಮನ್ ನಿಂತಿದ್ದ ಶಿಖರದ ಇನ್ನೊಂದು ಕಡೆ ಅದೇ ರೀತಿಯ ಆದರೆ ಇನ್ನೂ ಸ್ವಲ್ಪ ಎತ್ತರವಾದ ಇನ್ನೊಂದು ಬೆಟ್ಟದ ಶಿಖರ, ಅದರಾಚೆ ಭಯಂಕರವಾದ ರೀತಿ ನೇರವಾಗಿ, ಬರಡಾಗಿ ಎದ್ದು ನಿಂತಿದ್ದ ಗಡ್ಡದ ಬೆಟ್ಟ.

ತಾನೀಗ ನಿಂತಿದ್ದ ಬೆಟ್ಟಸಾಲಿನಿಂದ ಆಚೆಗೆ ರಾಮನ್ ಎಂದೂ ಹೋಗಿರಲಿಲ್ಲ. ಅವನ ಮನೆ ಇದ್ದ ಕಡೆ ಕೆರೆಯ ಬಳಿ ಪ್ರತಿಯೊಂದು ಹಾದಿ, ಕಣಿವೆಗಳನ್ನೂ ಆಚೆ ಕಡೆ ವ್ಯವಸಾಯದ ಕ್ಷೇತ್ರಗಳಿಗೆ ಹೋಗುವ ಮಾರ್ಗಗಳನ್ನೂ ಅವನು ಚೆನ್ನಾಗಿ ಬಲ್ಲ. ಒಬ್ಬನೇ ಮನೆಯಿಂದ ಹೊರಕ್ಕೆ ಹೋಗುವಂತಾದ ದಿನಗಳಿಂದ ತನಗೆ ತಿಳಿದಿದ್ದ ಮಾರ್ಗಗಳಲ್ಲಿ ಅವನು ಮೈಲಿಗಟ್ಟಲೆ ನಡೆದಿದ್ದ. ಆದರೆ ಈ ಕಡೆಗೆ ಹಾದಿಗಳೇ ಇಲ್ಲ. ಗಡ್ಡದ ಬೆಟ್ಟದ ನೆರಳಲ್ಲಿನ ಈ ಕಡೆಗೆ ಯಾರೂ ಬರುತ್ತಲೆ ಇರಲಿಲ್ಲ. ಆದರೆ ಆರ್ಚಿಡ್‌ಗಳು ಬೆಳೆಯುವುದು ಇಲ್ಲೇ ಎಂದು ತಾತ ನಟೇಶನ್ ಹೇಳಿದ್ದ.

ಪ್ರಾತಃಕಾಲದ ಹಗಲಿನಲ್ಲಿ ಹಳದಿ ಕಣ್ಣಿನ ಹುಲಿಯ ಕಥೆ ಮೂರ್ಖತನದ್ದೆನಿಸಿತು. ಬೆಟ್ಟದ ಇಳಿಜಾರುಗಳೂ. ರಾಮನ್ ಇದ್ದಲ್ಲಿಂದ ಕೆಳಗಡೆ ಕಣಿವೆಗಳೂ ಪ್ರಶಾಂತವಾಗಿಯೇ ಇದ್ದು ಲಾಂಟಾನಾ ಪೊದೆಗಳ ಮೇಲೆ ಕುಳಿತಿದ್ದ ಬುಲ್ ಬುಲ್ ಹಕ್ಕಿಗಳ ಚಿಲಿಪಿಲಿ ನಿನಾದ ಇಡೀ ಪ್ರದೇಶವನ್ನು ತುಂಬಿತ್ತು.

ಇಲ್ಲಿಂದ ನಾನು ನೇರವಾಗಿ ಕೆಳಕ್ಕಿಳಿದು ಕಮರಿಯ ತಳದವರೆಗೂ ಹೋಗಿ ಆಮೇಲೆ ಗಡ್ಡದ ಬೆಟ್ಟದ ಕಡೆಗೆ ಕಮರಿಯಿಂದ ಮೇಲಕ್ಕೆ ಹತ್ತಿ ನಡೆದರೆ ದಾರಿ ತಪ್ಪುವುದಿಲ್ಲ ಎಂದು ರಾಮನ್ ಯೋಚಿಸಿದ. ಇಳಿಜಾರಿನಲ್ಲಿ ಕೆಳಕ್ಕಿಳಿದು ಬಂದ ಜಾಗ ಗುರುತಿಟ್ಟುಕೊಂಡು ಕಣಿವೆಯ ಕೆಳಗಡೆ ತಳದಲ್ಲಿ ಅದೇ ಸ್ಥಳಕ್ಕೆ ಹಿಂದಿರುಗಿ ಮತ್ತೆ ಬೆಟ್ಟವನ್ನೇರಿ ಬರುವುದು.

ಅದು ಸುಲಭವಾಗಿಯೇ ಕಂಡಿತು. ಕಣಿವೆ ತುಂಬಾ ದೊಡ್ಡದಾಗೇನೂ ಇರಲಿಲ್ಲ. ಅವನು ಹೊರಟ ಹಾದಿಯ ಗತಿ ಪತ್ತೆಯಾಗದೆ ತೊಂದರೆಯಾಗುವ ಸಂಭವ ಕಾಣಲಿಲ್ಲ. ತಾನು ನಿಂತಿದ್ದೆಡೆ ಕಣಿವೆ ಉತ್ತರ–ದಕ್ಷಿಣವಾಗಿದ್ದು ಸ್ವಲ್ಪ ಮುಂದೆ ಗಡ್ಡದ ಬೆಟ್ಟದ ಕಡೆಗೆ ಪೂರ್ವದಿಕ್ಕಿನಲ್ಲಿ ಸಾಗಿದ್ದುದನ್ನು ರಾಮನ್ ಗಮನಿಸಿದ.

ಅವನು ಕೆಳಗಿಳಿಯಲಾರಂಭಿಸಿದ. ಅದು ಸುಲಭವಾಗಿರಲಿಲ್ಲ. ಮೈಯಿಂ

ದಲೇ ಒರಟಾದ ಲಾಂಟಾನಾ ಪೊದೆಗಳನ್ನು ಭೇದಿಸಿಕೊಂಡು ಮುನ್ನಡೆಯು ಬೇಕಾಗಿತ್ತು. ಮಳೆಯಿಂದ ನೆಲ ಇನ್ನೂ ಒದ್ದೆಯಾಗಿದ್ದು ಅಲ್ಲಲ್ಲಿ ಜಾರು ತ್ತಿತ್ತು. ಕೆಲವೊಮ್ಮೆ ಕಾಲಿಟ್ಟಾಗ ಕಲ್ಲುಗಳು ಜರುಗಿ ಕೆಳಕ್ಕುರುಳುತ್ತಿದ್ದವು. ಬುಟ್ಟಿ ಬೇರೆ ಅಡ್ಡಿಯಾಗಿತ್ತು. ಒಂದು ಕೈಯಿಂದ ಅದನ್ನು ಹಿಡಿದುಕೊಳ್ಳದಿ ದ್ದರೆ ಅದು ಮೈಗೆ ತಾಗುತ್ತಿತ್ತು. ಅಥವಾ ಅಕ್ಕಪಕ್ಕದಲ್ಲಿ ರೆಂಬೆಗಳಿಗೆ ಸಿಕ್ಕಿಕೊಳ್ಳುತ್ತಿತ್ತು. ಕಾಡುದ್ರಾಕ್ಷಿ ಬಳ್ಳಿಗಳು ಕೈಕಾಲುಗಳಿಗೆ ತೊಡರಿ ಕೊಳ್ಳುವಂತಿದ್ದವು. ಮಾಗಿದ ಕೆಲವು ಒಳ್ಳೇ ಹಣ್ಣುಗಳನ್ನು ಕಿತ್ತು ಅವನು ಬುಟ್ಟಿಯಲ್ಲಿದ್ದ ಊಟದ ಜತೆಗಿಟ್ಟ.

ದಾರಿ ಸವೆಯುತ್ತಲೇ ಇಲ್ಲವೇನೊ ಎಂದು ರಾಮನ್‌ಗೆ ಸ್ವಲ್ಪ ಹೊತ್ತು ಅನ್ನಿಸಿತು, ಸುತ್ತಮುತ್ತಲೂ ಪೊದೆಗಳಾಚೆ ಇಣುಕಿ ನೋಡಿದರೆ ಕಣಿವೆಯ ತಳ ಇನ್ನು ಬಹು ದೂರವಿರುವಂತೆಯೇ ಭಾಸವಾಯಿತು. ಆದರೆ ಬರಬರುತ್ತ ಲಾಂಟಾನಾ ಬಳ್ಳಿಗಳು ಕಡಿಮೆಯಾಗಿ ಅಪರಿಚಿತವಾದ ಕಾಡು ಸಸ್ಯಗಳ ಬೆಳವಣಿ ಗೆಯಿದ್ದ ಪ್ರದೇಶ ಬಂದಿತು. ಕೆಲವೊಮ್ಮೆ ಈ ಕಾಡು ಸಸ್ಯಗಳು ಅವನೆತ್ತ ರಕ್ಕೂ ಬೆಳದಿದ್ದವು, ಇಲ್ಲಿ ಸ್ವಲ್ಪ ಬಯಲು ಪ್ರದೇಶದಲ್ಲಿ ಜರೀಗಿಡಗಳು ಕಾಲಿಗೆ ತಗಲಿದಾಗ ಒದ್ದೆಯಿಂದ ಥಣ್ಣಗಾಗುತ್ತಿತ್ತು. ಮೇಲುಗಡೆ ಕೇಳಿಸು ತ್ತಿದ್ದ ಬುಲ್ ಬುಲ್ ಹಕ್ಕಿಗಳ ಕಲರವವೂ ದೂರವಾಗುತ್ತ ಬಂದಿತು, ದೂರ ದಲ್ಲಿ ಬಾರ್ಬೆಟ್ ಹಕ್ಕಿಯೊಂದರ "ಟೂಕೂರ್, ಟೂಕೂರ್, ಟೂಕೂರ್" ಎಂಬ ಕೂಗು ಸ್ಪಷ್ಟವಾಗಿ ಕೇಳಿಬಂದಿತು. ರಾಮನ್‌ನ ಎದುರಿನಲ್ಲೇ ಮರದ ಮೇಲೆ ಕುಳಿತಿದ್ದ ಇನ್ನೊಂದು ಹಕ್ಕಿ ಉತ್ತರವಾಗಿ ಕೂಗಿತು, ತನ್ನ ಪುಟ್ಟ ಬಾಲದಿಂದ ದಪ್ಪನೆಯ ಮೈಯಿನ ಆಯವನ್ನು ಸರಿಪಡಿಸಿಕೊಂಡು ಈ ಹಕ್ಕಿ ರೆಂಬೆಯಿಂದ ಇನ್ನೊಂದು ರೆಂಬೆಗೆ ಹಾರಾಡಿದಾಗ ಹಸಿರು ಬಣ್ಣ ಹೊಳೆದು ದನ್ನು ರಾಮನ್ ಕಂಡ.

ಇನ್ನೇನು ಅವನು ಕಣಿವೆಯ ತಳ ತಲಪಿದ್ದ. ಅಲ್ಲಿ ವಿಶ್ರಮಿಸಿಕೊಳ್ಳಲು ನಿಂತು ಹೆಗಲಿಂದ ಬುಟ್ಟಿಯನ್ನು ಕಳಚಿ ನೆಲಕ್ಕಿಳಿಸಿ ಅದಕ್ಕೆ ಕಟ್ಟಿದ್ದ ಹುರಿ ತನ್ನ ಚರ್ಮ ತರಿದಿದ್ದ ಭಾಗವನ್ನು ಉಜ್ಜಿಕೊಂಡ. ಈ ಕಾಡಿನಲ್ಲಿ ಅದೆಷ್ಟು ನಿಶ್ಯಬ್ದ ! ಎತ್ತಿನ ಗಾಡಿಗಳು, ತಮಿಳು ಸಂಭಾಷಣೆ, ಬಟ್ಟೆ ಒಗೆಯುವ ಶಬ್ದ, ಬಸ್ಸಿನ ಹಾರನ್, ನಾಯಿಗಳ ಬೊಗಳುವಿಕೆ, ಕೋಳಿಮರಿಗಳ ಚಿಲಿಪಿಲಿ ಶಬ್ದ ಹೀಗೆ

ಪಟ್ಟಣದ ಗಲಾಟೆಗೆ ರಾಮನ್ ಒಗ್ಗಿಹೋಗಿದ್ದ; ಮೇಲೆ ಚೆನ್ನಾಗಿ ಕೇಳಿಸುತ್ತಿದ್ದು ತಾನು ಕೆಳಗಿಳಿಯುತ್ತಿದ್ದಂತೆ ದೂರವಾಗುತ್ತ ಬಂದ ಹಕ್ಕಿಗಳ ದನಿ ಬಿಟ್ಟರೆ ಇಲ್ಲಿ ಪೂರ್ಣ ಮೌನ ಆವರಿಸಿತ್ತು. ಬೆಟ್ಟದ ಮೇಲ್ಭಾಗದಲ್ಲಿ ಬೀಸುತ್ತಿದ್ದ ಗಾಳಿ ಇಲ್ಲಿನವರೆಗೆ ಬರುತ್ತಿರಲಿಲ್ಲವಾದ್ದರಿಂದ ಇಲ್ಲಿ ನೆರಳುಗಳು ಸಹಾ ನಿಶ್ಚಲವಾಗಿದ್ದವು.

ರಾಮನ್ ಮತ್ತೆ ನಡೆಯಹತ್ತಿದ. ನಿಧಾನವಾಗಿ ಹೆಜ್ಜೆಹಾಕುತ್ತ ನೆಲವನ್ನು ಪರಿಕಿಸುತ್ತ ನಡೆದ, ಕಣಿವೆ ಅರಣ್ಯವನ್ನು ಪ್ರವೇಶಿಸುತ್ತಿದ್ದಂತೆ ಅಲ್ಲಿ ಭಾರೀ ಮರಗಳು, ದಟ್ಟವಾಗಿ ಬೆಳೆದ ಪೊದೆಗಳು ಕಣಿವೆಯ ತಳಭಾಗವನ್ನು ತುಂಬಿದುದನ್ನು ಕಂಡ. ಇಲ್ಲೇ ಎಲ್ಲಾದರೂ ಆರ್ಚಿಡ್ ಬೆಳೆದಿರಬಹುದು. ಮರಗಳ ನಡುವೆ ಸೂರ್ಯನ ಕಿರಣವೊಂದು ಹಾದುಬಂದು ಕೆಳಗಡೆ ನಾಗಲಿಂಗ ಪುಷ್ಪವೊಂದರ ಮಂದವರ್ಣದ ನೆತ್ತಿಯ ಮೇಲೆ ಬಿದ್ದು ಅದು ಹೊಳೆಯುತ್ತಿತ್ತು. ಗಂಟುಗಂಟಾಗಿ ಬೆಳೆದ ಮರವೊಂದರ ಶಾಖೆಯ ಸುತ್ತ ಬಿಳಿಯ ಕಾಡು ಹೂಗಳು ಸೂಕ್ಷ್ಮವಾದ ಚಕ್ರಾಕಾರದಲ್ಲಿ ಬೆಳೆದಿದ್ದವು. ಆದರೆ ನಸುಗೆಂಪಿನ ಅಥವಾ ಬಿಳಿಯ ಬಣ್ಣದ "ರೆಂಬೆಯ ಮೇಲಿನ ಚಿಟ್ಟೆ" ಎಲ್ಲಿಯೂ ಕಣ್ಣಿಗೆ ಬೀಳಲಿಲ್ಲ.

ಕ್ಷಣಕಾಲ ಗಾಳಿ ಬೀಸಿ ಮರಗಳ ಎಲೆಗಳು ಮರಮರಗುಟ್ಟುವ ಶಬ್ದ ಕೇಳಿಸಿದಂತೆ ರಾಮನ್‌ಗೆ ಭಾಸವಾಯಿತು. ಆದರೆ ಗಾಳಿ ನಿಶ್ಚಲವಾಗಿತ್ತು, ಇಲ್ಲ ಅದಲ್ಲ ಶಬ್ದ. ಕಣಿವೆಯ ತಳದಲ್ಲಿ ಕಾಡುಪೊದೆಗಳ ಮೂಲಕ ಹರಿಯುತ್ತಿದ್ದ ಸಣ್ಣ ತೊರೆಯೊಂದರ ನೀರಿನ ಶಬ್ದ ಅದು. ಅವನು ನೀರಿನ ಅಂಚಿಗೆ ಬಂದು ಕಲ್ಲೊಂದರ ಮೇಲೆ ಬಾಗಿ ತೊರೆಯ ನೀರು ಕುಡಿಯಲು ಮುಂದಾದ. ತಾನು ಹಿಂದಿರುಗುವಾಗ ಈ ಕಲ್ಲು ಗುರುತಾಗಿರುವುದೆಂದು ಭಾವಿಸಿದ, ಅಗಲವಾಗಿದ್ದು ಪಾಚಿಕಟ್ಟಿದ್ದ ಕಲ್ಲು. ಮಧ್ಯೆ ಸ್ವಲ್ಪ ಹಳ್ಳದಂತಿದ್ದು ಅಲ್ಲಿ ಮಳೆನೀರು ನಿಲ್ಲುತ್ತಿತ್ತು. ಈ ಕಲ್ಲನ್ನು ಸುಲಭವಾಗಿ ಗುರುತಿಸಬಹುದು. ಆದರೂ ಖಚಿತವಾಗಿರಲೆಂದು ರಾಮನ್ ಸಣ್ಣ ಕಲ್ಲೊಂದನ್ನು ಹುಡುಕಿ ಅದರಿಂದ ಈ ಕಲ್ಲಿನ ಮೇಲೆ ಒಂದು ಗುರುತು ಕೆತ್ತಿದ. ಈಗ ಅದರ ಗುರುತು ತಪ್ಪುವಂತೆಯೇ ಇಲ್ಲ. ತೊರೆಯ ಹಾದಿಯಲ್ಲೇ ಮುಂದೆ ಸಾಗಿ ಹಿಂದಿರುಗುವಾಗ ಈ ಜಾಗದತನಕ ಹೀಗೆಯೇ

ಬಂದು ಇಲ್ಲಿಂದ ಮತ್ತೆ ಬೆಟ್ಟದ ಮೇಲಕ್ಕೆ ಹತ್ತುವುದೆಂದುಕೊಂಡ ರಾಮನ್.

ರಾಮನ್ ಹೆಚ್ಚು ಹೊತ್ತು ವಿಶ್ರಮಿಸಿಕೊಳ್ಳಲಾಗಲಿಲ್ಲ. ಈಗ ಅವನು ಅರಣ್ಯ ತಲುಪಿದ್ದುದರಿಂದ ಆರ್ಚಿಡ್ ಹುಡುಕುವ ಆತುರ ಹೆಚ್ಚಾಯಿತು. ಎದ್ದು ತೊರೆಯ ಅಂಚಿನಲ್ಲೇ ಮುನ್ನಡೆದ. ಹಾದಿಯಲ್ಲಿ ಗಿಡಬಳ್ಳಿಗಳ ಬೆಳೆ ತುಂಬಾ ದಟ್ಟವಾಗಿದ್ದರೆ ಆಗ ನೀರೊಳಕ್ಕೇ ಇಳಿದು ನಡೆಯುತ್ತಿದ್ದ. ಉದ್ದಕ್ಕೂ ಆರ್ಚಿಡ್‌ಗಾಗಿ ನೆಲದ ಶೋಧ ಮುಂದುವರಿದಿತ್ತು. ಅವನ ಹೆಜ್ಜೆ ಸಪ್ಪಳ ಮತ್ತು ನೀರು ಹರಿಯುವ ಶಬ್ದದ ಹೊರತಾಗಿ ಇನ್ನಾವ ಶಬ್ದವೂ ಕೇಳಿಬರುತ್ತಿರಲಿಲ್ಲ. ಬೆಟ್ಟದ ಮೇಲುಗಡೆ ದೂರದಲ್ಲಿ ಬಾರ್ಬೆಟ್ ಹಕ್ಕಿಯ ಕೂಗು ಕೇಳುತ್ತಿತ್ತು. ಪ್ರಾಯಶಃ ಈ ಮೌನ ತನ್ನ ಆಗಮನದ ದೆಸೆಯಿಂದಲೇ ಇರಬಹುದೆಂದೂ. ತಾನು ಹೋದಮೇಲೆ ಈ ಸ್ಥಳ ಸಣ್ಣ ಪುಟ್ಟ ಪ್ರಾಣಿಗಳ ಹರಿದಾಟ, ಧ್ವನಿಗಳಿಂದ ತುಂಬುವುದೆಂದೂ ಅವನಲ್ಲಿ ಒಂದು ರೀತಿಯ ಭಯಭ್ರಾಂತ ಭಾವನೆ ಮೂಡಿತು. ಈ ಸ್ತಬ್ಧ ಜಗತ್ತಿನಲ್ಲಿ ಹಠಾತ್ತನೆ ಜೀವನದ ಸೂಚನೆಗಳು ಕಂಡು ಬರುವುದೋ ನೋಡೋಣವೆಂದು ಕ್ಷಣಕಾಲ ಅವನು ಸದ್ದಿಲ್ಲದೆ ನಡೆದ, ಆದರೆ ಯಾವ ಸೂಚನೆಯೂ ಕಾಣಬರಲಿಲ್ಲ.

ಆರ್ಚಿಡ್ ಹುಡುಕಲು ಇನ್ನೂ ಎಷ್ಟು ಕಾಲ ಬೇಕು ? ಆಗಲೆ ಸೂರ್ಯ ಆಕಾಶದಲ್ಲಿ ಸಾಕಷ್ಟು ಮೇಲೇರಿದ್ದು ಬಿಸಿಲು ಕಣಿವೆಯೊಳಕ್ಕೆ ಬೀಳುತ್ತಿತ್ತು ? ಮೇಲೆ ಬೆಳೆದಿದ್ದ ಮರಗಳ ಮೂಲಕ ಹಾಯ್ದು ಬಂದ ಸೂರ್ಯ ಕಿರಣಗಳು ಇಲ್ಲಿ ನೆಲದ ಮೇಲೂ, ತೊರೆ ನೀರಿನ ಮೇಲೂ ಚಿತ್ರವಿಚಿತ್ರವಾದ ನೆರಳುಗಳನ್ನು ಮೂಡಿಸುತ್ತಿದ್ದವು. ಈಗಿರುವ ಜಾಗ ನೋಡಿದರೆ ತಾನು ಈಗಾಗಲೆ ಕಣಿವೆ ಪೂರ್ವಕ್ಕೆ ತಿರುಗುವ ಸ್ಥಳವನ್ನು ದಾಟಿಬಂದು ಈಗ ನೇರವಾಗಿ ಗಡ್ಡದ ಬೆಟ್ಟದ ಕಡೆಗೆ ಹೋಗುತ್ತಿರುವುದಾಗಿ ರಾಮನ್ ಗಮನಿಸಿದ. ಆರ್ಚಿಡ್ ಸಿಗಲಿ, ಸಿಗದಿರಲಿ–ಸೂರ್ಯ ನೆತ್ತಿಯ ಮೇಲೆ ಬಂದೊಡನೆ ತಾನು ಹಿಂದಿರುಗಬೇಕು. ತಾಯಿಗೆ ಹಾಗೆಂದು ಮಾತು ಕೊಟ್ಟಾಗಿತ್ತು. ಅಲ್ಲದೆ ಹಳದಿ ಕಣ್ಣಿನ ಹುಲಿ ಇದೆಯೋ ಇಲ್ಲವೋ. ಸಂಜೆಯಾದ ಮೇಲೆ ಈ ಇಳಿಜಾರುಗಳಲ್ಲಿರಲು ಅವನಿಗೂ ಮನಸ್ಸಿರಲಿಲ್ಲ.

"ನಾನು ಆರ್ಚಿಡ್ ಪತ್ತೆಮಾಡಲೇಬೇಕು. ಪತ್ತೆಮಾಡಲೇಬೇಕು" ಎಂದು ರಾಮನ್ ತನಗೆ ತಾನೇ ಉಸಿರಿಕೊಂಡ. ಆಗ ಅವನ ಮನದಲ್ಲಿ ರಹಸ್ಯ ಯೋಚನೆಯೊಂದು ಮೂಡಿತು. ಒಂದು ವೇಳೆ ತಾತ ನಟೇಶನ್ ಹೇಳಿದ್ದು ತಪ್ಪಾಗಿದ್ದರೆ ? ಆರ್ಚಿಡ್ ಗಡ್ಡದ ಬೆಟ್ಟದ ಇಳಿಜಾರಿನಲ್ಲಿ ಈ ಕಡೆಯು ಬದಲು ಆಚೆಯಕಡೆ ಬೆಳೆಯುವುದಾದರೆ ? ಒಂದು ವೇಳೆ ಆರ್ಚಿಡ್ ಅಂದರೇನೆಂಬುದು ನಿಜವಾಗಿ ತಾತ ನಟೇಶನ್‌ಗೆ ಗೊತ್ತೇ ಇಲ್ಲದಿದ್ದರೆ ? ಆಗ; ಆರ್ಚಿಡ್ ಹುಡುಕಲು ತನಗುಳಿದಿದ್ದ ಈ ಒಂದೇ ದಿನ ವ್ಯರ್ಥವಾಗಿಬಿಡುವುದು. ನಾಳೆ ಶುಕ್ರವಾರ. ಮರ್ಕಿನಮ್ಮ ಬಯಲು ಸೀಮೆಗೆ ಹೋಗಿಬಿಡುವಳು, ತನ್ನ ಅವಕಾಶ ತಪ್ಪಿಹೋಗುವುದು.

ತಾತ ನಟೇಶನ್ನನ ಬಳಿಗೆ ಹೋಗಲೇಬಾರದಿತ್ತು ಎಂದು ರಾಮನ್ ತನ್ನ ಮನದಲ್ಲಿ ಅಸಮಾಧಾನ ಏರುತ್ತಿದ್ದಂತೆ ಯೋಚಿಸಿದ. ಬಹುಕಾಲದಿಂದ ತನ್ನ ಕಥೆಗಳೊಡನೆಯೇ ಜೀವಿಸಿದ್ದ ಆತನಿಗೆ ಇನ್ನೇನೂ ತಿಳಿದಿರಲಾರದು. ಆತ ನನ್ನನ್ನು ಗುರುತಿಸಲೂ ಇಲ್ಲ. ನನ್ನನ್ನು ಕಂಡು ನನ್ನ ತಂದೆಯ ಹೆಸರಿನಿಂದ ಕರೆದ. ಆತ ಸದಾ ಹಳದಿಕಣ್ಣಿನ ಹುಲಿ ಮತ್ತು ಗಡ್ಡದ ಬೆಟ್ಟದ ವಿಷಯವನ್ನೇ ಮಾತಾಡುತ್ತಿದ್ದು ಬೇರೆ ವಿಷಯವೇನನ್ನೂ ಯೋಚಿಸಲಾರದಂತಾಗಿದ್ದನೇನೋ. ಪ್ರಾಯಶಃ ಅದರಿಂದಲೇ ಅತ ಆರ್ಚಿಡ್ ಇಲ್ಲಿ ಬೆಳೆಯುವುದೆಂದು ನನಗೆ ಹೇಳಿರಬಹುದು....ಆದರೆ ಕೇಳುವುದಕ್ಕೆಲ್ಲ ಯಾರೂ ಇರಲಿಲ್ಲವಲ್ಲ, ಮಾಸ್ತರು ಮುನಿಸ್ವಾಮಿಗೆ ಗೊತ್ತಿಲ್ಲ. ನನ್ನ ದೊಡ್ಡಪ್ಪನಿಗೂ ಅಷ್ಟೇ. ಇದೇ ನನಗಿದ್ದ ಏಕೈಕ ಅವಕಾಶ—

ಹಠಾತ್ತನೆ ದನಿಯೊಂದು ಕೇಳಿಸಿ ಅವನ ನಡಿಗೆ ನಿಂತಿತು, ಏನದು ?

ತನ್ನ ಸುತ್ತ ಆವರಿಸಿದ್ದ ಮೌನಕ್ಕೆ ಅವನು ಒಗ್ಗಿಹೋಗಿದ್ದ. ಈಗ ಈ ದನಿಯ ಪ್ರತಿಧ್ವನಿಯಿಂದ ಈ ಮೌನ ಆಕ್ರೋಶಿಸಿದಂತೆ ಭಾಸವಾಯಿತು. ಎಲ್ಲೋ ಒಂದು ಸಣ್ಣ ರೆಂಬೆ ಮುರಿದು ಶಬ್ದವಾಗಿದ್ದಿತು.

ಹಿಂದಕ್ಕೆ ತಿರುಗಿ ತಾನು ಬಂದಿದ್ದ ಹಾದಿ ನೋಡಿದ. ಏನೂ ಕಾಣಿಸಲಿಲ್ಲ. ಬಂಡೆಗಳ ಮೇಲೆ ಹರಿಯುತ್ತಿದ್ದ ನೀರು, ಅದರ ಇಕ್ಕೆಲಗಳಲ್ಲೂ ಬೆಳೆದಿದ್ದ ಗಿಡಬಳ್ಳಿಗಳು, ಮೇಲುಗಡೆ ದೊಡ್ಡ, ಗಂಟು ಗಂಟಾಗಿ ಬೆಳೆದಿದ್ದ ಮರಗಳು. ತಾನು ಬಂದಿದ್ದ ಹಾದಿಯ ಸುಳಿವೂ ಇರಲಿಲ್ಲ. ಕೆಳಗಡೆ ಬೆಳೆದಿದ್ದ

ಕಾಡುಸಸ್ಯಗಳು ತನ್ನ ನಡಿಗೆ ಗುರುತುಗಳನ್ನು ಮತ್ತೆ ಆವರಿಸಿ ಮುಚ್ಚಿಬಿಟ್ಟಂತಿತ್ತು. ಮುಂದಕ್ಕೆ ತಿರುಗಿ ಅವನು ಇನ್ನೊಂದು ಹೆಜ್ಜೆ ಮುಂದಿಟ್ಟಿದ್ದವನು ಮತ್ತೆ ಹಾಗೆಯೇ ನಿಂತ,

ಅದೋ, ಅಲ್ಲಿ ! ಈಸಾರಿ ತಪ್ಪು ತಿಳಿಯುವ ಕಾರಣವೇ ಇಲ್ಲ. ತನ್ನ ಸುತ್ತಣ ಮೌನ ಭೇದಿಸುವ ಶಬ್ದವೊಂದು ಕೇಳಿಸಿತು. ಕೆಳಗಡೆ ತೊರೆಯ ಬಳಿಯ ಪೊದೆಗಳಲ್ಲಿ ಸರಸರ ಶಬ್ದ. ಇನ್ನು ಕೆಲ ಹೆಜ್ಜೆ ಮುಂದೆ ನಡೆದು ಅವನು ಮತ್ತೆ ನಿಂತು ಆಲಿಸಿದ.

ಚಟಚಟ, ಮರ್ಮರ ಶಬ್ದ ! ಆ ಬಗ್ಗೆ ಸಂಶಯವೇ ಇರಲಿಲ್ಲ, ಅದೊಂದು ಪ್ರಾಣಿ, ದೊಡ್ಡ ಪ್ರಾಣಿ ಕಾಡಿನಲ್ಲಿ ಹಾದುಹೋಗುತ್ತಿತ್ತು— ರಾಮನ್‌ನ ಹಾದಿಯನ್ನೇ ಅನುಸರಿಸಿ ಬರುತ್ತಿತ್ತು,

ಹಳದಿ ಕಣ್ಣಿನ ಹುಲಿ !



# ೧೪

ರಾಮನ್‌ನ ಎದೆ ಭಯದಿಂದ ಬಿಗಿದುಕೊಂಡಿತು. ಅವನು ಏನು ಮಾಡಬೇಕು.

ಅವನು ಓಡಲಾರಂಭಿಸಿದ, ಆದರೆ ಕೆಳಗಡೆ ಗಿಡಬಳ್ಳಿ ದಟ್ಟವಾಗಿ ಬೆಳೆದಿದ್ದುದರಿಂದ ಓಡುವುದು ದುಸ್ಸಾಧ್ಯವಾಗಿತ್ತು. ತೊರೆಯ ಪಕ್ಕದಲ್ಲಿದ್ದ ಕಲ್ಲುಗಳನ್ನು ಎಡವಿ ಬೀಳುತ್ತಿದ್ದ. ಪಕ್ಕದಲ್ಲಿ ಬೆಳೆದಿದ್ದ ಮೊನಚಾದ ರೆಂಬೆಗಳು ಕೈಗಳಿಗೆ ತಗಲಿ ತರಿದು ಗಾಯವಾಗುತ್ತಿತ್ತು, ಷರಟು ಹರಿಯುವಂತಿತ್ತು. ಅವನು ಓಡುತ್ತಿದ್ದಂತೆ ಬುಟ್ಟಿ ಮೈಗೆ ತಗಲುತ್ತಿತ್ತು, ಹಠಾತ್ತನೆ ಅದು ಒಂದು ರೆಂಬೆಗೆ ತಗಲಿ ಸಿಕ್ಕಿಕೊಂಡಿತು. ಅವನು ಭುಜದಿಂದ ಹುರಿಯನ್ನು ತೆಗೆದೆಸೆದು ಬುಟ್ಟಿ ಅಲ್ಲಿ ತೂಗಾಡಲು ಬಿಟ್ಟು ತಾನು ಮುಂದಕ್ಕೋಡಿದ. ಮೇಲುಗಡೆ ತೊರೆಯ ಮೇಲಕ್ಕೆ ಬಾಗಿ ಬೆಳೆದಿದ್ದ ದೊಡ್ಡ ಮರವೊಂದಿತ್ತು. ಅದನ್ನು ತಲಪಿದರೆ ಹತ್ತಿ ಮೇಲುಗಡೆ ಅದರ ರೆಂಬೆಗಳ ನಡುವೆ ಅವಿತುಕೊಳ್ಳಬಹುದು.

ಶಬ್ದ ಈಗ ಹತ್ತಿರದಲ್ಲೇ ಕೇಳಿಬರುತ್ತಿತ್ತು. ಅದು ಇಡೀ ಕಣಿವೆಯೆಲ್ಲವನ್ನೂ ಆವರಿಸಿದಂತೆ ಭಾಸವಾಗುತ್ತಿತ್ತು. ರಾಮನ್ ಮರ ಹತ್ತಿ ಮೊದಲನೆ ರೆಂಬೆಯ ಮೇಲೇರಿದ. ಹಾಗೆಯೇ ಮೇಲಕ್ಕೇರುತ್ತ ರೆಂಬೆಗಳು ಸಣ್ಣದಾಗಿ ಇನ್ನು ತನ್ನ ಭಾರ ತಡೆಯಲಾರದೆನ್ನುವಷ್ಟು ಮೇಲಕ್ಕೇರಿದು ನಡುಗುತ್ತ ಮರದ ಕಾಂಡವನ್ನು ಭದ್ರವಾಗಿ ಹಿಡಿದುಕೊಂಡು ಶಬ್ದ ಇನ್ನೂ ಸಮೀಪಿಸುತ್ತಿರುವುದನ್ನು ನಿರೀಕ್ಷಿಸುತ್ತ ಕುಳಿತ.

ಪೊದೆಗಳ ಮೂಲಕ ಹಾದುಬಂದು ಒಂದು ಆಕೃತಿ ಕಾಣಿಸಿಕೊಂಡು ಥಟ್ಟನೆ ಮುನ್ನುಗ್ಗಿ ಮರದ ಬುಡದಲ್ಲಿನ ಪೊದೆಗಿದೆಯೇನೂ ಇಲ್ಲದ ಸಣ್ಣ ನಿರಾತಂಕ ಜಾಗಕ್ಕೆ ಬಂದು ನಿಂತಿತು.

ಅದೊಂದು ಹಸು !

ರಾಮನ್ ಚಕಿತನಾಗಿ ನೋಡಿದ, ಬೆಟ್ಟದ ಹಳ್ಳಿಯೊಂದರಿಂದ ಬಂದು ಬಿಟ್ಟಿದ್ದ ಒಂದು ಹಸು. ಆ ಹಸುವಿನಿಂದ ರಕ್ಷಿಸಿಕೊಳ್ಳಲು ಅವನು ಮರ ಏರಿದ್ದ.



ಅವನಿಗೆ ಭಾರಿ ನಗು ಬಂದಿತು. ಹೊಟ್ಟೆ ಬಿರಿಯುವಂತೆ ನಕ್ಕು ಕುಳಿತಿದ್ದವನು ಆಯತಪ್ಪಿ ಬೀಳದಂತೆ ಒಂದು ಕೊಂಬೆಯನ್ನು ಹಿಡಿದುಕೊಂಡ, ನಗುತ್ತಿದ್ದವನು ಇದ್ದಕ್ಕಿದ್ದಂತೆ ನಗು ನಿಲ್ಲಿಸಿ ಆಶ್ಚರ್ಯದಿಂದ ನೋಡಿದ,

ಮರದ ಡೊಗರೊಂದರಲ್ಲಿ ಉದ್ದವಾದ ತೆಳ್ಳನೆಯ ಎಲೆಗಳು. ನಸುಗೆಂಪಿನ ಚಿಟ್ಟೆಗಳು ನೀಳವಾದ ಕಾಂಡವೊಂದರ ಮೇಲೆ ಒಟ್ಟಿಗೆ ಕಲೆತಿದ್ದಂತಿದ್ದ ಹೂಗಳು ಇದ್ದ ಪುಟ್ಟ ಗಿಡವೊಂದನ್ನು ಕಂಡ. ಅವನು ಕುಳಿತಲ್ಲಿಂದಲೇ ಕೈಚಾಚಿದರೆ ಸಿಗುವಷ್ಟು ಹತ್ತಿರದಲ್ಲಿತ್ತು.

ಆರ್ಚಿಡ್ !

ರಾಮನ್ ಒಮ್ಮೆ ಗಟ್ಟಿಯಾಗಿ ಕಣ್ಣು ಮುಚ್ಚಿಕೊಂಡು ಮತ್ತೆ ದೊಡ್ಡದಾಗಿ ತೆರೆದು ನಂಬಲಿಕ್ಕೆ ಆಗದೆ ದಿಟ್ಟಿಸಿ ನೋಡಿದ. ಹಾಗೆಯೇ ಹೂವಿಗೆ ಹತ್ತಿರವಾಗಿ ಸರಿದು ಒಂದು ಕೈಯಿಂದ ಮೃದುವಾಗಿ ಅದನ್ನು ಸ್ಪರ್ಶಿಸಿದ. ಮಂದ ಸುಗಂಧ ಅವನ ಅನುಭವಕ್ಕೆ ಬಂದಿತು. ಎಷ್ಟು ಸುಂದರವಾಗಿತ್ತು ಅದು ! ತಿಳಿ ಕೆಂಪು ಬಣ್ಣ, ದಳದ ಮೂಲ ಸ್ವಲ್ಪ ಅಚ್ಚ ಗುಲಾಬಿ ಬಣ್ಣದ್ದಾಗಿತ್ತು. ಮರ್ಕಿನಮ್ಮನಿಗೆ ತಾನು ತಂದುಕೊಟ್ಟಿದ್ದ ಹೂಗಳಲ್ಲಿ ಅಷ್ಟೇಕೆ–ತಾನು ಬೆಟ್ಟಗಳಲ್ಲೂ ತೋಟಗಳಲ್ಲೂ ನೋಡಿದ್ದ ಎಲ್ಲ ಹೂವುಗಳಿಗಿಂತ ಇದು ಅತ್ಯಂತ ಸೊಗಸಾಗಿತ್ತು.

ತನ್ನ ಬುಟ್ಟಿ ಎಲ್ಲಿ ? ಕಾಡಿನಲ್ಲಿ ಧಾವಿಸಿ ಬರುವುದರಲ್ಲಿ ಅದನ್ನು ಹಿಂದೆಯೇ ಬಿಟ್ಟುಬಂದಿದ್ದ. ಮರದಿಂದ ಕೆಳಕ್ಕಿಳಿದು ಬಂದ. ಹಸು ಸುತ್ತಮುತ್ತಲೆಲ್ಲೂ ಕಾಣಿಸಲಿಲ್ಲ. ಅದು ಕಣಿವೆಯಲ್ಲಿ ಮೇಲಕ್ಕೆ ನಡೆದುಹೋಗಿರಬೇಕು. ತನ್ನ ಉದ್ದೇಶಗಳಲ್ಲಿ ಹಸು ಹೋದುದನ್ನು ಗಮನಿಸಿರಲಿಲ್ಲ.

ಹಗ್ಗಕಟ್ಟಿದ್ದ ಬುಟ್ಟಿಯು ಹೊರಗಡೆಗೆ ಚಾಚಿ ನಿಂತಿದ್ದ ರೆಂಬೆಯಿಂದ ಇನ್ನೂ ಹಾಗೇ ತೂಗು ಬಿದ್ದಿತ್ತು. ರಾಮನ್ ಅದನ್ನೆತ್ತಿಕೊಂಡು ಆಹಾರವನ್ನು ಹೊರತೆಗೆದು ಕಲ್ಲೊಂದರ ಮೇಲಿಟ್ಟ. ಆಮೇಲೆ ಬುಟ್ಟಿ ಎತ್ತಿಕೊಂಡು ಬಂದು ಮರವನ್ನೇರಿ ಆರ್ಚಿಡ್ ಬೆಳೆಯುತಿದ್ದ ರೆಂಬೆಯ ಬಳಿಸಾರಿ ಡೊಗರಿನಲ್ಲಿದ್ದ ಒಣಗಿದೆಲೆಗಳು ಮತ್ತು ರೆಂಬೆ ಮಣಕುಗಳ ನಡುವಣಿಂದ ಕರಣೆಯ ನೆರವಿನಿಂದ ಮೆತ್ತಗೆಹೊರತೆಗೆದ. ಅದನ್ನು ಬುಟ್ಟಿಯಲ್ಲಿಟ್ಟು ಅದರ ಸುವಾಸನೆ ಸವಿದು ಹರ್ಷತುಂಬಿಬಂದು ನಕ್ಕ. ಆರ್ಚಿಡ್‌ಅನ್ನ ಅವನು ಪತ್ತೆ ಮಾಡಿಬಿಟ್ಟಿದ್ದ ! "ಆ

ದೊಡ್ಡಕಾಡಿನಲ್ಲಿ–ಗಡ್ಡದ ಬೆಟ್ಟದ ಕಣಿವೆಯಲ್ಲಿನ ಮರಗಳಲ್ಲಿ" ಎಂದು ಮಾತ್ರ ತಾತ ನಟೇಶನ್ ತಿಳಿದಿದ್ದ. ಆದರೆ ಮರಗಳ ಮೇಲೆ ಸಸ್ಯಗಳು ಬೆಳೆಯುವುದು ಯಾರಿಗೆ ಗೊತ್ತು? ತಾತ ನಟೇಶನ್ ಮಾತುಗಳನ್ನು, ಹೆಸರುಗಳನ್ನು ತಪ್ಪಾಗಿ ಗ್ರಹಿಸಿ ಗೊಂದಲ ಮಾಡಿಕೊಂಡಿದ್ದನೆಂದು ರಾಮನ್ ಭಾವಿಸಿದ. ಅಥವಾ ಆತ ಅವಸರದಲ್ಲಿ ಸರಿಯಾಗಿ ಯೋಚಿಸಲೇ ಇಲ್ಲವೇನೋ.

ಹತ್ತಿರದಲ್ಲೇ ಬೇರೆ ಮಾದರಿಯ ಆರ್ಚಿಡ್‌ಗಳೂ ಬೆಳೆದಿರಬಹುದೇ? ಅವನಲ್ಲಿ ಉದ್ವೇಗ ಹೆಚ್ಚಿ ರಾಮನ್ ಲಗುಬಗನೆ ಮರದಿಂದ ಇಳಿದು ಇನ್ನೊಂದು ಮರ ಹತ್ತಿದ. ಅಲ್ಲಿ ಇನ್ನೊಂದು ಆರ್ಚಿಡ್ ಸೊಸಿ ಇತ್ತು; ಆದರೆ ಅದೂ ತನ್ನ ಬಳಿಯಿದ್ದಂಥ ನಸುಗೆಂಪು ಬಣ್ಣದ್ದೇ. ತಾನು ಕುಳಿತಲ್ಲಿಂದ ಸುತ್ತಲೂ ನೋಡಿದ. ಅದೋ ಅಲ್ಲಿ, ತೊರೆಯಾಚೆ ಆ ಮರದ ಮೇಲೆ ಎತ್ತರವಾದ ಆ ರೆಂಬೆಯ ಪಕ್ಕದಲ್ಲಿ ಹಳದೀ ಬಣ್ಣದ್ದೇನೊ ಕಾಣಿಸುವುದಲ್ಲಾ?

ಅವನು ಕೆಳಕ್ಕಿಳಿದು ತೊರೆಗೆ ಧುಮುಕಿ ನೀರು ತುಂಬಾ ಥಣ್ಣಗೆ ಕೊರೆಯುತ್ತಿದ್ದುದನ್ನು ಲೆಕ್ಕಿಸದೆ ತೊರೆ ದಾಟಿ ದಡದಲ್ಲಿದ್ದ ಆ ಇನ್ನೊಂದು ಮರ ಹತ್ತಿದ. ಹೌದು, ಅದೂ ಒಂದು ಆರ್ಚಿಡ್, ಕಡುಗೆಂಪು ಗೆರೆಯಿದ್ದ ಹಳದಿ ದಳಗಳಿದ್ದ ಹೂವು; ಅದು ಮಡಚಿಕೊಂಡಿದ್ದ ಭಾಗ ಹಳದಿ ಚುಕ್ಕೆಗಳೊಂದಿಗೆ ಕಡುಗೆಂಪು ಬಣ್ಣದಾಗಿತ್ತು.

ಆಮೇಲೆ ಬಹಳ ಹೊತ್ತು ರಾಮನ್ ಮತ್ತೊಂದು ಬಗೆಯ ಆರ್ಚಿಡ್‌ಗಾಗಿ ಹುಡುಕಾಡಿದ. ಸೂರ್ಯ ನೆತ್ತಿಯಮೇಲಿದ್ದು ಇನ್ನೇನು ಹುಡುಕಾಟ ನಿಲ್ಲಿಸಿ ಹೋಗಬೇಕೆಂದುಕೊಂಡಾಗ ಅವನು ತನ್ನ ಬಳಿಯಿದ್ದುದಕ್ಕಿಂತ ದೊಡ್ಡ ಆರ್ಚಿಡ್ ಕಂಡ, ಕೆಂಪು ಗೆರೆಯ ಹಳದಿ ಹಸಿರು ದಳಗಳಿದ್ದ ದೊಡ್ಡ ಹೂವು.

ಮರ್ಕಿನಮ್ಮನಿಗೆ ಒಂದಲ್ಲ ಮೂರು ಆರ್ಚಿಡ್‌ಗಳು ಇನ್ನೂ ಹುಡುಕಲು ಹೇಳಿಯಿದ್ದರೂ ಬುಟ್ಟಿಯಲ್ಲಿಡಲು ಜಾಗವಿಲ್ಲ. ಆರ್ಚಿಡ್ ಸಸಿಗಳನ್ನು ಮೃದುವಾಗಿ ಎತ್ತಿ ಬುಟ್ಟಿಯಲ್ಲಿಟ್ಟು ತೊರೆಯಿಂದ ನೀರನ್ನು ಅವುಗಳ ಮೇಲೆ ಚಿಮುಕಿಸಿದ. ತಾನು ಮೊಟ್ಟಮೊದಲು ಕಂಡ ನಸುಗೆಂಪು ಹೂವೇ ಅವನಿಗೆ ಬಹು ಪ್ರಿಯವಾಗಿತ್ತು. ಅದರ ಬಣ್ಣಗಳು ಸೂಕ್ಷ್ಮವಾಗಿದ್ದವು. ಎಸಳುಗಳು ನವುರಾಗಿದ್ದವು; ಸುವಾಸನೆಯಿಂದಿದ್ದುದೂ ಅದೊಂದೇ.

ಮೂರು ಆರ್ಚಿಡ್‌ಗಳು ! ಒಂದಕ್ಕೆ ಮೂರು ರೂಪಾಯಿ; ಒಟ್ಟು ಒಂಬತ್ತು ರೂಪಾಯಿ !

ಆ ಮೊತ್ತ ಅವನನ್ನು ದಿಙ್ಮೂಢನನ್ನಾಗಿಸುವಂತಿತ್ತು. ರಾಮನ್ ಹಿಂದಕ್ಕೊರಗಿ ಕುಳಿತು ಬುಟ್ಟಿಯತ್ತ ನೋಡಿದ. ಒಂಬತ್ತು ರೂಪಾಯಿ ! ತಾನು ಮೂರು ರೂಪಾಯಿ ಗಳಿಸಬಹುದೆಂದು ತಾಯಿಗೆ ಹೇಳಿದ್ದ. ಆದರೆ ಮೂರಲ್ಲ-ಒಂಬತ್ತು ರೂಪಾಯಿ ತಂದೆನೆಂದಾಗ ಆಕೆ ಏನು ಹೇಳುವಳು ? ಆರು ರೂಪಾಯಿ ತಾನು ಹೆಚ್ಚಾಗಿ ಬಂದದ್ದು.

ಥಟ್ಟನೆ ಅವನಿಗೆ ಒಂದು ಯೋಚನೆ ಹೊಳೆಯಿತು. ಹೆಚ್ಚಾಗಿದ್ದ ಆರು ರೂಪಾಯಿ ! ತರುವನೆಂದು ತಾಯಿ ನಿರೀಕ್ಷಿಸದಿದ್ದ ಆರು ರೂಪಾಯಿ !

"ಇಲ್ಲ, ಹಾಗೆ ಮಾಡಲಾರೆ !" ಯೋಚನೆ ಇನ್ನು ಪೂರ್ತಿಯಾಗಿ ರೂಪುಗೊಳ್ಳುವುದಕ್ಕೆ ಮೊದಲೇ ಅವನು ತನಗೆ ತಾನೇ ಹೇಳಿಕೊಂಡ.

"ಹೌದು, ಮಾಡಬಹುದು !" ಇನ್ನೊಂದು ದನಿ ಹೇಳಿತು. "ಏಕಾಗ ಬಾರದು ?"

ಆರ್ಚಿಡ್ ಸಿಕ್ಕದೆ ತಾನು ಸಂಪಾದಿಸಬಹುದೆಂದು ಹೇಳಿದ್ದ ಮೂರು ರೂಪಾಯಿಗಳನ್ನೇ ತಾಯಿಗೆ ಏಕೆ ಕೊಡಬಾರದು ! ನಿಜವಾಗಿ ತನಗೆ ಬಂದುದೆಷ್ಟೆಂಬುದು ಆಕೆಗೆ ಗೊತ್ತಾಗುವಂತಿಲ್ಲ, ಉಳಿದ ಆರು ರೂಪಾಯಿಗಳನ್ನು ತಾನೇ ಇಟ್ಟುಕೊಳ್ಳಬಹುದು ಅಥವಾ ಅದನ್ನು ತಂಬುಸ್ವಾಮಿ ಅಂಗಡಿಯಲ್ಲಿ ಗಾಜಿನ ಬೀರುವಿನಲ್ಲಿದ್ದ ಪುಸ್ತಕ ಕೊಂಡು ಅದನ್ನು ಖರ್ಚುಮಾಡಿಬಿಡಬಹುದು.

ಆ ಪುಸ್ತಕ ಹೊಂದಬಹುದು ಎಂದು ಅವನು ಯೋಚಿಸಿ, "ಆದನ್ನು ನಾನೇ ಸ್ವಂತಕ್ಕೆ ಇಟ್ಟುಕೊಳ್ಳಬಹುದು. ನಿಜವಾದ ಪುಸ್ತಕವನ್ನು ನಾನು ನನ್ನದಾಗಿಟ್ಟುಕೊಳ್ಳಬಹುದು."

ಆ ಮೂರು ರೂಪಾಯಿಗಳಿಂದಲೇ ತಾಯಿ ಸಂತೋಷಪಡುವಳು.ಒಂದೇ ದಿನ ಅಷ್ಟೊಂದು ಹಣವನ್ನು ಅವನು ಎಂದೂ ಹೊಂದಿರಲಿಲ್ಲ. ಆ ಪುಸ್ತಕ–ಅದನ್ನು ಆಕೆ ಗಮನಿಸುವುದೂ ಇಲ್ಲ. ಹೇಗಿದ್ದರೂ ಅದನ್ನು ಓದಲು ತಾನೇ ಎತ್ತಿಕೊಂಡು ಹೋಗುತ್ತಾನೆ. ಬೇರೆ ಸಮಯದಲ್ಲಿ ಅದು ಅವನ ಮೂಲೆಯಲ್ಲಿ ಬಿದ್ದಿರುತ್ತದೆ. ಯಾರೂ ಮುಟ್ಟುವುದಿಲ್ಲ.

ಅದು ಸರಿಯಲ್ಲ ಎಂದು ರಾಮನ್ ಒಪ್ಪಿಕೊಂಡ. ಆದರೆ ತನ್ನ ತಂದೆ ಇಲ್ಲದಾಗ ತಾನು ಶಾಲೆಯಲ್ಲಿ ಓದುವುದು ಬಿಟ್ಟು ಪ್ರತಿದಿನವೂ ಕೆಲಸಕ್ಕೆ ಹೋಗುವುದು ಸರಿಯೇನು ? ಅಲ್ಲದೆ ತಾನು ಕಷ್ಟಪಟ್ಟು ಕೆಲಸವನ್ನು ಮಾಡಿದ್ದುಂಟು. ಗಂಟೆಗಟ್ಟಲೆ ಪೈನ್ ಶಂಕುಗಳನ್ನು, ಅಣಬೆಯನ್ನು ಆರಿಸುತ್ತಿದ್ದುದುಂಟು; ಮರ್ಕಿನಮ್ಮಸಿಗಾಗಿ ಹೂಗಳನ್ನು ಹುಡುಕುವುದಕ್ಕೆ ಇನ್ನೂ ಹೆಚ್ಚು ಕಾಲ ಕಳೆದದ್ದುಂಟು. ವಾಸ್ತವವಾಗಿ ಹೆಚ್ಚು ಹಣ ಗಳಿಸಲು ಹೂಗಳನ್ನು ಮಾರಬೇಕೆಂದು ಅವನಿಗೆ ಯೋಚನೆ ಬಂದುದರಿಂದಲೇ ಮರ್ಕಿನಮ್ಮನ ಬಂಗಲೆಗೆ ಹೋಗಲು ಅವಕಾಶವಾದದ್ದು ; ತಾನು ಬೆಟ್ಟದ ಹೂಗಳನ್ನು ಮಾರಿ ಗಳಿಸಿದ ಹಣವಿಲ್ಲದಿದ್ದರೆ ಸ್ಥಿತಿ ನಿಜವಾಗಿ ಕೆಡುತ್ತಿತ್ತು. ಈ ಹೊತ್ತು ತಾನು ಹೊರಟುಹೋಗುವ ಮೊದಲು ಬೇಕೆಂದು ಮರ್ಕಿನಮ್ಮ ಆಶಿಸಿದ್ದ ಹೂಗಳಿಗಾಗಿ ತಾನು ತನ್ನ ಜೀವಮಾನದಲ್ಲಿ ಹಿಂದೆಂದೂ ಇಲ್ಲದಷ್ಟು ಹೆಚ್ಚು ದೂರ ನಡೆದಿದ್ದ. ಆ ಹೆಚ್ಚಿನ ರೂಪಾಯಿಗಳನ್ನು ನಿಜವಾಗಿ ತನಗಾಗಿಯೇ ಸಂಪಾದಿಸಿದ್ದಲ್ಲವೇ ?

ಅಲ್ಲದೆ ಅಕ್ಕಿಗೆ ಹಣ ಇರುವುದಿಲ್ಲವೆಂದು ತಾವೆಲ್ಲರೂ ಇನ್ನು ಭಯಪಡಬೇಕಾಗಿಯೂ ಇರಲಿಲ್ಲ. ಬಯಲು ಸೀಮೆಯಿಂದ ತಂದೆ ಕಳಿಸುತ್ತಿದ್ದ ಹಣ ಬೇಕಾದಷ್ಟು ಇಲ್ಲದಿದ್ದರೂ ಊಟಕ್ಕೆ ಸಾಕಾಗುತ್ತಿತ್ತು.

ನಿರ್ಧರಿಸಿಬಿಟ್ಟೆನೆಂದು ರಾಮನ್ ಆಗ ಸ್ಪಷ್ಟಮಾಡಿಕೊಂಡ. ನಾಳೆ ಪುಸ್ತಕ ತನ್ನದಾಗುವುದು.

ಅವನು ಮೇಲಕ್ಕೆದ್ದು ತನ್ನ ಅನ್ನದ ಪೊಟ್ಟಣ, ಹಣ್ಣುಗಳು ಮತ್ತು ಮೈಸೂರುಪಾಕನ್ನು ಹೊರತೆಗೆದ. ತೊರೆಯ ಹಂಚಿನಲ್ಲಿ ಸ್ವಲ್ಪ ನುಣುಪಾಗಿದ್ದ ಕಲ್ಲೊಂದರ ಮೇಲೆ ಕುಳಿತು ಅವನ್ನು ತಿಂದ. ಮರವೆಲೆಗಳ ನೆರಳುಗಳು, ಸೂರ್ಯನ ಕಿರಣಗಳಿಂದ ತೊರೆ ಹೊಳೆಯುತ್ತಿತ್ತು. ಈ ನೆರಳುಗಳು ಹರಿಯುತ್ತಿದ್ದ ನೀರಿನ ಮೇಲೆ ಹೊಳೆದು ಹರಡಿ ಹೋಗುತ್ತಿದ್ದವು. ಅಲ್ಲಲ್ಲಿ ಪಾಚಿಗಟ್ಟಿದ ತೊರೆಯ ತಳದಲ್ಲಿ ದುಂಡಗೆ ಬೆಳಕು ಹೊಳೆದು ಬಂದು ತೆಳ್ಳನೆಯ ಮೀನುಗಳು ಓಡಾಡುತ್ತಿದ್ದುದು ಗೋಚರವಾಗುತ್ತಿತ್ತು. ತಿಂದು ಮುಗಿಸಿದ ಮೇಲೆ ರಾಮನ್ ಕೈಗಳನ್ನು ಮಡಿಸಿದ ಮೊಣಕಾಲುಗಳ ಸುತ್ತ ಸುತ್ತಿ ಮುದುಡಿ ಕುಳಿತಂತೆ ಅವನು ರೋಮಾಂಚನಗೊಂಡ.

ಈ ಹೊತ್ತು ತಾನು ಹಿಂದಿರುಗಿ ಪುಸ್ತಕ ಕೊಳ್ಳಲು ಹೋಗುವ ವೇಳೆಗೆ ಬಹಳ ಹೊತ್ತಾಗಿಬಿಡುವುದು. ಬೆಳಿಗ್ಗೆ ನಡೆದು ತಂಬುಸ್ವಾಮಿ ಅಂಗಡಿ ತಲಪಿ "ತಾತ, ನಿನ್ನ ಪುಸ್ತಕ ಕೊಳ್ಳಲು ಬಂದಿದೀನಿ" ಎನ್ನುವನು.

ಆಗ ತಂಬುಸ್ವಾಮಿ "ಯಾವುದು ಬೇಕು, ತಂಬಿ ?" ಎಂದು ಬೀರುವಿನಲ್ಲಿನ ತೆಳ್ಳನೆಯ ಹೊತ್ತಗೆಗಳಿಗೆ ಕೈಹಾಕುತ್ತಾನೆ.

ಅದಕ್ಕೆ ರಾಮನ್ "ಇಲ್ಲ, ತಾತ, ನನಗೆ ಆ ಪುಸ್ತಕ ಬೇಕು" ಎಂದು ಗಾಜಿನ ಬೀರುವಿನತ್ತ ಕೈತೋರಿಸುವನು.

"ತಮಾಷೆ ಮಾಡ್ತೀಯ, ತಂಬಿ" ಎಂದು ತಂಬುಸ್ವಾಮಿ ಮಾರುನುಡಿಯುತ್ತಾನೆ.

ಪುಸ್ತಕದಂಗಡಿಯವನ ಅಚ್ಚರಿಗೆ ನಕ್ಕು ರಾಮನ್, "ಇಲ್ಲ, ತಾತ. ತಮಾಷೆ ಮಾಡುತ್ತಿಲ್ಲ. ಆ ಪುಸ್ತಕ ಕೊಳ್ಳಬೇಕೆಂದೇ ಬಂದಿದೀನಿ. ನಾನು ಓದಿ ಪಂಡಿತನಾಗುವೆನೆಂದು ನಾನು ನಿನಗೆ ಹೇಳಿರಲಿಲ್ಲವೆ ? ಅದು ಪಂಡಿತನ ಪುಸ್ತಕವೆಂದು ನೀನೇ ಅಂದಿದ್ದೆಯಲ್ಲಾ. ಎಂದಾದರೊಂದು ದಿನ ಅದನ್ನು ಕೊಳ್ಳುವೆನೆಂದು ನಾನು ಹೇಳಿರಲಿಲ್ಲವೆ ?" ಎನ್ನುತ್ತಾನೆ.

ಆಗ ತಂಬುಸ್ವಾಮಿ ಇನ್ನು ಆಶ್ಚರ್ಯಚಕಿತನಾಗಿಯೇ ಹಣ ತೆಗೆದುಕೊಂಡು ನೋಟುಗಳನ್ನೂ, ನಾಣ್ಯಗಳನ್ನೂ ಎಣಿಸುತ್ತಾನೆ. ಪುಸ್ತಕವನ್ನು ಗಾಜಿನ ಬೀರುವಿನಿಂದ ಹೊರತೆಗೆದು ಬಟ್ಟೆಯಿಂದ ಮೃದುವಾಗಿ ದೂಳು ಕೊಡವಿ ಅದನ್ನು ರಾಮನ್ನನ ಕೈಗಿಡುತ್ತಾನೆ.

"ಆಮೇಲೇನು ?" ರಾಮನ್ ಚಕಿತನಾದ, ಗಟ್ಟಿಯಾಗಿ ಹಾಗೆಂದುದು ಕೇಳಿಸಿದಂತಾಯಿತು. ಆತಂಕದಿಂದ ಸುತ್ತಲೂ ತಿರುಗಿ ನೋಡಿದ. ಆದರೆ ಇದ್ದುದು ತಾನೊಬ್ಬನೇ.

"ಆಮೇಲೇನು ?" ತಾನು ಓದುವ ಪುಸ್ತಕಗಳು ಮತ್ತು ಕಲಿಯುವ ಹಲವು ವಿಷಯಗಳ ಬಗ್ಗೆ ಮರ್ಕಿನಮ್ಮನೊಡನೆ ಮಾತಾಡಿದ ದಿನ ಆಕೆ ಆ ಮಾತುಗಳನ್ನು ಆಡಿದ್ದಳು.

ಆಯಿತು. ಪುಸ್ತಕ ಕೊಂಡಮೇಲೆ ಏನು ? ಹಾಗೆಂದರೇನು ? ಪುಸ್ತಕ ತೆಗೆದುಕೊಂಡು ಓದುವುದು. ಯಾರೋ ಜತೆಯಲ್ಲಿದ್ದು ತನ್ನಯೋಚನೆಗಳನ್ನು ಶೋಧಿಸುತ್ತಿರುವಂತೆ ಅವನಿಗನ್ನಿಸಿತು. ಪುಸ್ತಕ ತನ್ನದಾಗುವುದು.

ತಾನೇ ಇಟ್ಟುಕೊಳ್ಳುವ ಅನೇಕ ಪುಸ್ತಕಗಳಲ್ಲಿ ಇದು ಮೊದಲನೆಯದು. ಮರ ಕಡಿಯುವವನ ಮಗ ಬರೀ ಮರ ಕಡಿಯುವವನಷ್ಟೇ ಆಗಿರಬೇಕಾಗುವುದಿಲ್ಲ. ಬೇಕೆಂದರೆ ತಾನೂ ಪಂಡಿತನಾಗಬಹುದು !

ಕೋಪ ಬಂದವನಂತೆ ರಾಮನ್ ಜಿಗಿದೆದ್ದು ಮರದ ನೆರಳಿನಲ್ಲಿ ತನ್ನ ಬುಟ್ಟಿ ಇಟ್ಟಿದ್ದಲ್ಲಿಗೆ ಹಿಂದಿರುಗಿದ. ಅದರ ಹಗ್ಗವನ್ನು ಭುಜಕ್ಕೆ ತೂಗಿಹಾಕಿಕೊಂಡು ಒಂದು ಕೈಯಿಂದ ಬುಟ್ಟಿಯನ್ನು ಭದ್ರವಾಗಿ ಹಿಡಿದು ಇನ್ನೊಂದು ಕೈಯನ್ನು ಮುಖಕ್ಕೆ ಅಡ್ಡವಾಗಿಟ್ಟು ಹುಲ್ಲು ಪೊದೆಗಳ ನಡುವೆ ಹಾಯ್ದು ನಡೆಯುತ್ತ ತೊರೆಯಿಂದ ಕೆಳಕ್ಕೆ ಬೇಗ ಬೇಗನೆ ಮುಂದಕ್ಕೆ ಸಾಗಿದ. ತಾನು ಗುರುತುಮಾಡಿದ್ದ ಬಂಡೆಯ ಬಳಿ ಬಂದಾಗ ಮೇಲಕ್ಕೆ ತಿರುಗಿ ಕಡಿದಾದ ಇಳಿಜಾರನ್ನು ಹತ್ತಿದ. ಮೇಲಕ್ಕೇರುತ್ತಿದ್ದಂತೆ ಮೊಂಡು ಬೇರುಗಳು ತಗಲಿ ಅವನ ಕೈಗಳು ತರಿದಿದ್ದವು; ಆದರೆ ಅದನ್ನು ಅವನು ಲೆಕ್ಕಿಸಲೇ ಇಲ್ಲ. ಅವನ ಯೋಚನೆಯೆಲ್ಲಾ ಈಗ ತನ್ನದಾಗಲಿದ್ದ ಪುಸ್ತಕದ ಮೇಲಿತ್ತು.

## ೧೫

ರಾಮನ್ ಬೆಟ್ಟದ ಮೇಲಿನ ಬಂಗಲೆ ತಲಪಿದಾಗ ಮಧ್ಯಾಹ್ನ ಮುಗಿಯುತ್ತ ಬಂದಿತ್ತು. ಗೇಟಿನ ಮೂಲಕ ಒಳಕ್ಕೆ ನಡೆದು ವರಾಂಡದ ಅಂಚಿಗೆ ಬಂದ. ಮರ್ಕಿನಮ್ಮ ಕಾಣಲಿಲ್ಲ.

ಉದ್ರೇಕದ ಭರದಲ್ಲಿ ನಾಚಿಕೆಯನ್ನು ಮರೆತು ಅವನು "ಅಮ್ಮಾ ಅಮ್ಮಾ," ಎಂದು ಕೂಗಿದ.

ಕೆಲ ಕ್ಷಣಗಳಲ್ಲೇ ಮರ್ಕಿನಮ್ಮ ಹೊರಕ್ಕೆ ಬಂದಳು. ಆದರೆ ಈಗ ಆಕೆ ಚಕ್ರದ ಕುರ್ಚಿಯಲ್ಲಿ ಕುಳಿತಿರಲಿಲ್ಲ. ಊರುಗೋಲುಗಳ ಸಹಾಯದಿಂದ ನಡೆದು ಬಂದಳು. ಕಾಲಿಗೆ ಪ್ಲಾಸ್ಟರಿನ ಬದಲು ಬರೀ ಬ್ಯಾಂಡೇಜ್ ಕಟ್ಟಿತ್ತು.

"ರಾಮನ್, ನೀನು ಇಂದು ಬರುವುದಿಲ್ಲವೆಂದು ಅಂದುಕೊಂಡಿದ್ದೆ"– ಆಶ್ಚರ್ಯ–ಸಂತೋಷಗಳಿಂದ ಆಕೆ ನುಡಿದಳು

"ನೋಡಿ ಅಮ್ಮಾ!" ರಾಮನ್ ಕಾತುರದಿಂದ ಹೇಳಿದ. "ಆರ್ಕಿಡ್‌ಗಳನ್ನು ಹುಡುಕಿ ತಂದಿದ್ದೇನೆ. ಒಂದಲ್ಲ ಮೂರು ಬಗೆಯವು!"

"ನಿಜವಾಗಿಯೂ ? ಅದನ್ನು ತಾ, ನೋಡೋಣ" ಅವನಷ್ಟೆ ಆಕೆಯೂ ಕುತೂಹಲಭರಿತಳಾಗಿದ್ದಳು. ವರಾಂಡದಲ್ಲಿದ್ದ ಕುರ್ಚಿಯೊಂದರ ಬಳಿಗೆ ನಡೆದು ಅದರಲ್ಲಿ ಕುಳಿತಳು. ರಾಮನ್ ಬುಟ್ಟಿಯನ್ನು ಭುಜದಿಂದ ಹೊರತೆಗೆದು ಆಕೆಯ ಬಳಿಗೊಯ್ದ.

"ನಿಜವಾಗಿಯೂ ಹುಡುಕಿ ತಂದಿದ್ದೀಯ!" ಎಂದು ಆಕೆ ಉದ್ಗರಿಸಿದಳು. "ರಾಮನ್ ಇವು ಸುಂದರವಾಗಿದೆ. ನಾನು ಕನಸಿನಲ್ಲಿ ಸಹಾ–" ಆಕೆ ತಮಿಳಿನಲ್ಲಿ ಮಾತಾಡುವುದನ್ನು ಮರೆತುಬಿಟ್ಟಳು: ಆದರೆ ಆಕೆಯ ದನಿಗೆ ಭಾಷಾಂತರ ಅವಶ್ಯಕತೆ ಇರಲಿಲ್ಲ. ಆಕೆ ಪ್ರತಿಯೊಂದು ಆರ್ಕಿಡನ್ನೂ ಎತ್ತಿಕೊಂಡು ಪರೀಕ್ಷಿಸಿ ಹರ್ಷದಿಂದ ಉದ್ಗಾರ ಮಾಡುತ್ತ ಅವುಗಳ ಉದ್ದುದ್ದನೆ ಹೆಸರುಗಳನ್ನು

ಹೇಳುತ್ತಿದ್ದಾಗ ರಾಮನ್ ನಗುತ್ತ ನಿಂತ; ಕೊನೆಗೆ ಆಕೆ ಹಿಂದಕ್ಕೆ ಕುಳಿತು ಆವ ನತ್ತ ನೋಡಿದಳು. "ಸೊಗಸಾದ ಕೆಲಸ ಮಾಡಿದ್ದೀ ರಾಮನ್. ಇಷ್ಟೊಂದು ಅದೃಷ್ಟವನ್ನು ನಾನು ನಿರೀಕ್ಷಿಸಿಯೇ ಇರಲಿಲ್ಲ. ನಿನ್ನ ದುಡ್ಡನ್ನು ನೀನು ನಿಜ ವಾಗಿ ಸಂಪಾದಿಸಿದ್ದಿ. ತಡಿ, ಹಣ ಕೊಡುತ್ತೇನೆ" ಎಂದು ಆಕೆ ತಮಿಳಿನಲ್ಲಿ ಹೇಳಿ ದಳು.

ಮರ್ಕಿನಮ್ಮ ಮತ್ತೆ ವಾಪಸು ಬರುವವರೆಗೆ ರಾಮನ್ ಆತುರದಿಂದ ನಿರೀಕ್ಷಿಸಿ ನಿಂತಿದ್ದ. ಆಕೆ ನೋಟುಗಳನ್ನು ಒಂದೊಂದಾಗಿ ಎಣಿಸಿ ಕೊಟ್ಟಂತೆ ರಾಮನ್ ಮುಂದಕ್ಕೆ ಅಡಿಯಿಟ್ಟು ಅವನ್ನು ಕೈಗಿಟ್ಟುಕೊಂಡ, "ಎರಡು. ನಾಲ್ಕು, ಆರು. ಏಳು, ಎಂಟು, ಒಂಬತ್ತು. ಮೂರು ಆರ್ಕಿಡ್‌ಗಳಿಗೆ ಒಂಬತ್ತು ರೂಪಾಯಿ, ನಿನ್ನ ಆ ಅದ್ಭುತವಾದ ಪುಸ್ತಕದ ಬೆಲೆಗಿಂತ ಹೆಚ್ಚಾಯಿತು. ರಾಮನ್" ಆಕೆ ನಕ್ಕಳು.

ರಾಮನ್ ಥಟ್ಟನೆ ಉಸಿರೆಳೆದುಕೊಂಡ, ತಾನೇನು ಮಾಡುವೆನೆಂದು ಆಕೆಗೆ ಹೇಗೆ ಗೊತ್ತು ? ಆದರೆ ಪೂರ್ತಿಕಥೆ ಆಕೆಗೆ ಗೊತ್ತಾಗುವುದಿಲ್ಲವಲ್ಲಾ ತಾನು ತುಂಬಾ ಬಯಸಿದ್ದ, ಆರೂವರೆ ರೂಪಾಯಿ ಬೆಲೆಯ ಪುಸ್ತಕದ ವಿಷ ಯವನ್ನು ತಾನು ಒಂದು ದಿನ ಹೇಳಿದ್ದುದನ್ನು ಆಕೆ ಜ್ಞಾಪಕವಿಟ್ಟಿದ್ದಳು ಅಷ್ಟೇ. ಮಾತಾಡಬಯಸದೆ ಅವನು ತಲೆ ಅಲ್ಲಾಡಿಸಿದ.

"ಒಳ್ಳೇದು, ನಮಸ್ಕಾರ ರಾಮನ್ ನಾನು. ನಾಳೆ ಮುಂಜಾನೆ ಬಸ್ಸಿನಲ್ಲಿ ಹೊರಡುತ್ತೇನೆ. ಪುನಃ ನಾನು ನಿನ್ನನ್ನು ನೋಡುವ ಸಂಭವವಿರದು. ನೀನು ಚೆನ್ನಾಗಿ ಕೆಲಸಮಾಡಿದ್ದೀ. ಮುಂದಿನ ವರ್ಷ ನಿನ್ನನ್ನು ನೋಡುತ್ತೇನೆ. ಪ್ರಾಯಶಃ ಆಗ ನಾನೇ ಹೂಗಳನ್ನು ಹುಡುಕಲು ಸಾಧ್ಯವಾಗಬಹುದು. ಬೆಟ್ಟದ ದಾರಿಗಳಲ್ಲಿ ನನಗೆ ದಾರಿ ಬಲ್ಲವರೊಬ್ಬರು ನನ್ನ ಜತೆಗಿರಬೇಕಾಗುವುದು. ಬುಟ್ಟಿ ಹೊತ್ತು ಬರಲು ಯಾರಾದರೂ ಬೇಕಾಗುವುದು, ಆಗ ನೀನು ನಿನ್ನ ಪುಸ್ತಕವನ್ನು ನನಗೆ ತೋರಿಸಬೇಕು."

"ನಮಸ್ಕಾರ ಅಮ್ಮಾ"–ರಾಮನ್ ಮೆಲುದನಿಯಲ್ಲಿ ಹೇಳಿದ. "ತುಂಬಾ ಉಪಕಾರವಾಯಿತು, ಥ್ಯಾಂಕ್ಸ್" ಆಕೆಗೆ ವಂದಿಸಿ ತಿರುಗಿ ಕೊನೇ ಬಾರಿಗೆ ಆ ಹಾದಿಯಲ್ಲಿ ನಡೆದು ಮನೆಯಿಂದ ಹೊರಬಿದ್ದ.

ಮನೆ ತಲುಪುವುದಕ್ಕೆ ಸ್ವಲ್ಪ ಮುಂಚೆ ರಾಮನ್ ರಸ್ತೆಯಾಚೆ ಸಣ್ಣ

ಪೈನ್ ಮರವೊಂದರ ನೆರಳಿನಲ್ಲಿ ನಿಂತು ರಸ್ತೆಯಲ್ಲಿ ಯಾರಾದರೂ ಬರುತ್ತಿರುವರೋ ಎಂದು ನೋಡಿದ. ಯಾರೂ ಕಾಣಿಸಲಿಲ್ಲ. ಷರಟೊಳಗಿನಿಂದ ನೋಟುಗಳ ಕಂತೆಯನ್ನು ಹೊರತೆಗೆದು .ಒಂದು ರೂಪಾಯಿಯ ಮೂರು ನೋಟುಗಳನ್ನು ಎಣಿಸಿ ಅವನ್ನು ಒಂದು ಕೈಯಲ್ಲಿಟ್ಟುಕೊಂಡು ಉಳಿದ ಆರು ರೂಪಾಯಿಗಳನ್ನು ಷರಟಿನ ತುದಿಯಲ್ಲಿ ಇಟ್ಟು ಸುತ್ತಿ ಗಂಟುಹಾಕಿದ, ಆ ಗಂಟನ್ನು ನಿಕ್ಕರಿನೊಳಕ್ಕೆ ಸಿಕ್ಕಿಸಿ ಕೈಯಲ್ಲಿ ಮೂರು ರೂಪಾಯಿ ಇಟ್ಟುಕೊಂಡು ಮುಂದಕ್ಕೆ ನಡೆದ.

ಅವನ ತಾಯಿ ಸಂಜೆಯ ಊಟಕ್ಕೆ ಬಾಳೆ ಎಲೆಗಳನ್ನು ಹಾಕುತ್ತಿದ್ದಳು, ಅವನು ಬರುತ್ತಿದ್ದುದನ್ನು ಕಂಡೊಡನೆ ಆಕೆಯ ಹಣೆಯ ಮೇಲೆ ಯೋಚನೆಯಿಂದ ಮೂಡಿದ್ದ ಗೆರೆಗಳು ಮಾಯವಾಗಿ ಸಮಾಧಾನದ ನಿಟ್ಟುಸಿರುಬಿಟ್ಟು "ರಾಮನ್, ನೀನು ಬಂದುದು ಒಳ್ಳೆಯದಾಯಿತು. ಬೇಗ ಕೈಕಾಲು ತೊಳೆದುಕೊ ನಿನಗೆ ತುಂಬಾ ಹಸಿವಾಗಿರಬೇಕು" ಎಂದಳು.

"ನಾನು ಆರ್ಚಿಡನ್ನು ಪತ್ತೆಮಾಡಿದೆ, ಅಮ್ಮಾ. ಇದೋ ಮೂರು ರೂಪಾಯಿ" ಎಂದು ಅವನು ಹಣವನ್ನು ಮುಂದಿಟ್ಟ. ಅವನ ದನಿ ಅವನಿಗೇ ನೀರಸವಾಗಿ ಭಾಸವಾಯಿತು.

"ಒಳ್ಳೇ ಕೆಲಸ ಮಾಡಿದೆ, ಮಗೂ. ನೀನೆಂದರೆ ನನಗೆ ಹೆಮ್ಮೆ". ತಾಯಿ ಸಂತೋಷದಿಂದ ಹಾರ್ದಿಕವಾಗಿ ಹೇಳಿದಳು. ಆಕೆ ಹೇಳುವುದಕ್ಕಿಂತ ಹೆಚ್ಚಿಗೆ ತನ್ನ ಬಗ್ಗೆ ಆತಂಕಪಟ್ಟುಕೊಂಡಿರಬೇಕು ಎಂದು ಅವನು ಯೋಚಿಸಿದ. ತನ್ನ ಶೋಧನೆಯಲ್ಲಿ ಅವನು ಯಶಸ್ವಿಯಾಗಿದ್ದುದರಿಂದ ಯೋಚನೆಯ ಬದಲು ಹೆಮ್ಮೆಯುಂಟಾಗಿತ್ತು.

"ಇದರಿಂದ ದಾಸನ್‌ಗೆ ಒಂದು ಬೆಚ್ಚನೆಯ ಅಂಗಿ ತರಬಹುದು" ಅಮ್ಮ ಸಮಾಧಾನದಿಂದ ಹೇಳುತ್ತಿದ್ದಳು "ಅವನಿಗೆ ಪದೇ ಪದೇ ಶೀತವಾಗಿ ನೆಗಡಿ ಬರುತ್ತಿದೆ. ನಾಳೆ ನೀನು ಪೇಟೆಗೆ ಹೋಗಿ–ಅದರೆ, ರಾಮನ್. ನಿನ್ನ ಮೂರು ನಯೆಪೈಸೆ ತೆಗೆದಿಟ್ಟುಕೊಂಡಿಲ್ಲವಲ್ಲಾ"

"ಚಿಂತೆಯಿಲ್ಲ ಅಮ್ಮಾ. ಆ ಮೇಲೆ ಚಿಲ್ಲರೆ ಮಾಡಿಸಿದಾಗ ತೆಗೆದುಕೊಂಡರಾಯಿತು" ಎಂದು ಉಸುರಿ ರಾಮನ್ ಅವಸರವಾಗಿ ಹೊರಕ್ಕೆ ನಡೆದ. ಅವನ ಕೆನ್ನೆಗಳು ಬಿಸಿಯೇರಿದ್ದುವು.

ಮನೆಯ ಹೊರಗಡೆ ವಾಸಂತಿ ನೆಲದ ಮೇಲೆ ಕುಳಿತು ಸಣ್ಣ ಕೋಲೊಂದ ರಿಂದ ಮಣ್ಣಿನ ಮೇಲೆ ಬರೆಯುತ್ತಿದ್ದಳು. ಅವಳು ರಾಮನ್‌ನತ್ತ ನೋಡಿ ದಾಗ ಆಕೆಯ ಕಣ್ಣುಗಳು ಹೆಮ್ಮೆಯಿಂದ ಹೊಳೆಯುತ್ತಿದ್ದವು. "ನೋಡಣ್ಣ ನಾನು ಅಭ್ಯಾಸ ಮಾಡುತ್ತಿದ್ದೇನೆ. ತುಂಬಾ ಕತ್ತಲಾಗಿಬಿಡುವುದರೊಳಗೆ ನೀನು ಬಂದು ಒಂದು ಪಾಠ ಹೇಳಿಕೊಡುವೆಯೆಂದು ನಾನು ಎದುರು ನೋಡು ತ್ತಿದ್ದೆ." ಅವಳ ದನಿಯಲ್ಲಿ ಆಶಾಭಾವನೆಯಿತ್ತು.

ಅವಳಿಗಿಲ್ಲವೆನ್ನಬೇಕೆಂದು ಅವನಿಗನ್ನಿಸಿತು. ಅವನು ಬಳಲಿದ್ದ. ದಿನದ ಉದ್ರೇಕ ಅವನಲ್ಲಿ ತುಂಬಿತ್ತು. ವಿಚಿತ್ರವಾದಂಥ ಅಶಾಂತಿ ಅವನನ್ನಾವರಿ ಸಿತ್ತು. ಆದರೆ ವಾಸಂತಿಯ ಕಣ್ಣುಗಳಲ್ಲಿನ ನಿರೀಕ್ಷೆ ಕಂಡು ಅವನು ತಡೆದು ಮೃದುವಾಗಿಯೆ ಮಾತನಾಡಿದ.

"ಊಟವಾದ ಮೇಲೆ ಮಾಡೋಣ ತಂಗಚ್ಚಿ ಇನ್ನೂ ಬೆಳಕಿರುತ್ತದೆ. ಬಾ, ತೊರೆಗೆ ಹೋಗಿ ಕೈಕಾಲು ತೊಳೆದು ಬರೋಣ."

ರಾಮನ್ ತನ್ನೊಡನೆ ಬರುವಂತೆ ಕರೆದುದು ಕಂಡು ಸಂತಸವಾಗಿ ವಾಸಂತಿ ಜಿಗಿದೆದ್ದಳು. ಕೈಕಾಲುಗಳು ಮತ್ತು ಮುಖದಿಂದ ತಣ್ಣನೆಯ ನೀರು ಇನ್ನು ತೊಟ್ಟಿಕ್ಕುತ್ತಿದ್ದಂತೆ ಅವರು ಹಿಂದಿರುಗಿ ಬರುತ್ತಿದ್ದಾಗ ಅವಳು ಕೇಳಿದಳು.

"ಅಣ್ಣಾ."

"ಏನು ತಂಗಚ್ಚಿ ?"

"ನಾನು ಎಷ್ಟು ಓದಲು ಕಲಿತಿದ್ದೀನೆಂಬುದನ್ನು ಮಾರಿಯಮ್ಮನಿಗೆ ತೋರಿಸಿದೆ". ಮಾರಿಯಮ್ಮ ವಾಸಂತಿಯ ನಿಕಟ ಸ್ನೇಹಿತಳು, ಜೇಸುದಾಸನ್ನನ ತಂಗಿ.

"ಅವಳ ಮನಸ್ಸಿನ ಮೇಲೆ ಪರಿಣಾಮವಾಯಿತು ತಾನೇ ?" ರಾಮನ್ ಕೆಣಕುವಂತೆ ಕೇಳಿದ.

ವಾಸಂತಿ ಗಂಭೀರವಾಗಿ ಉಸುರಿದಳು: "ಓ, ಹೌದಣ್ಣಾ. ಅವಳು– ಅವಳು ತಾನೂ ಕಲಿಯಬೇಕೆಂದು ತುಂಬಾ ಆಸೆಪಡುತ್ತಾಳೆ. ಅಣ್ಣ, ನೀನು ಅವಳಿಗೂ ಪಾಠ ಹೇಳಿಕೊಡುವುದಕ್ಕೆ ಸಾಧ್ಯವೆ ?"

ರಾಮನ್ ಹುಬ್ಬುಗಂಟಿಕ್ಕಿದ. ಈ ಪಾಠ ಹೇಳುವ ವಿಷಯದಲ್ಲಿ ಇಷ್ಟೊಂದು ತಲೆಹಾಕಲು ಅವನು ಬಯಸಿರಲಿಲ್ಲ. ಅದು ತಾನು ಅಂದು

ಕೊಂಡಿದ್ದಕ್ಕಿಂತ ಹೆಚ್ಚುವೇಳೆ ತೆಗೆದುಕೊಳ್ಳಬಹುದು. ತಾನು ಬಯಸಿದುದನ್ನ ಓದಲಿಕ್ಕೆ ಸಮಯ ಸಿಗಲಾರದು.(ರಾಮಾಯಣ, ಪುಸ್ತಕದಿಂದವೆಂದು ಒಳದನಿ ಯೊಂದು ಉಸುರಿಅವನ ಮೈ ಪುಳಕಿತವಾಯಿತು.)ಪಾಠ ಹೇಳುವ ಮನಸ್ಸಿಲ್ಲದಿ ದ್ದರೆ ವಾಸಂತಿ,ದಾಸನ್‌ರನ್ನು ಇಂದು ಬೇಡ, ನಡೆಯಿರಿ ಎಂದು ಕಳಿಸಿಬಿಡಬ ಹುದು.ಆದರೆ ಬೇರೆಯವರಾರಾದರೂ ಇದ್ದರೆ–ಆದರೂ ಆ ಯೋಜನೆ ಅವನಿಗೆ ಹರ್ಷವುಂಟುಮಾಡಿತು. ವಾಸಂತಿಯೊಡನೆ ಪ್ರತಿಯೊಂದು ಪಾಠ ಮುಗಿಸಿದಂತೆ, ಅವಳಲ್ಲಿಜ್ಞಾನ ಬೆಳೆಯುತ್ತಿದ್ದುದನ್ನು ತಾನು ಪ್ರತಿಸಲ ಕಂಡಾಗಲೂ,ಅದು ಬೆಳೆ ಯಲು ತಾನು ನೆರವಾದೆನೆಂದು ಅರಿತಾಗಲೂ ಅವನಿಗೆ ತುಂಬಾ ಸಮಾಧಾನವಾ ಗುತ್ತಿದ್ದುದು ಜ್ಞಾಪಕಕ್ಕೆ ಬಂದಿತು. ಕೊನೆಗೆ ಅವನು ಒಪ್ಪಿ ತಲೆ ಅಲ್ಲಾಡಿಸಿದ "ಆಗಲಿ, ಮಾರಿಯಮ್ಮನಿಗೂ ಬರಹೇಳು".

"ಓ ಅಣ್ಣ, ನನಗೆ ತುಂಬಾ ಸಂತೋಷ". ವಾಸಂತಿ ಹರ್ಷದಿಂದ ಕುಣಿ ದಾಡಿದಳು. ಆ ವೇಳೆಗೆ ಇಬ್ಬರೂ ಮನೆ ತಲಪಿದರು. ಬಿಸಿಯಾಗಿ ಹೊಗೆ ಯಾಡುತ್ತಿದ್ದ, ಬಿಳಿಯ ಅನ್ನವನ್ನು ಆಗಲೇ ಎಲೆಗಳಲ್ಲಿ ಬಡಿಸಿತ್ತು. ಸಾಮಾ ನ್ಯವಾಗಿ ಅವರು ಮೌನವಾಗಿ ಊಟಮಾಡುತ್ತಿದ್ದರು. ಆದರೆ ಇಂದು ರಾತ್ರಿ ವಿಶೇಷವಿತ್ತು. ತನ್ನ ಸಾಹಸವನ್ನು ರಾಮನ್ ಅವರೆಲ್ಲರಿಗೂ ಬಣ್ಣಿಸಿದ. ತಾನು ಹಸುವನ್ನು ಕಂಡಿದ್ದು, ಆರ್ಚಿಡ್ ಹೂವನ್ನು ಪತ್ತೆಮಾಡಿದ್ದು, ಅದು ನೆಲದ ಮೇಲೆ ಬೆಳೆಯುವ ಬದಲು ಮರಗಳ ಮೇಲೆ ಬೆಳೆಯುವುದು ಎಲ್ಲವನ್ನೂ ಬಣ್ಣಿ ಸಿದ. ಹೇಳುತ್ತಿದ್ದವನು ಹಠಾತ್ತನೆ ನಿಲ್ಲಿಸಿಬಿಟ್ಟ—ತಾನು ಹೇಳಬಾರದೆಂದು ಕೊಂಡ ಭಾಗದ ನೆನಪಾಗಿ. ಇನ್ನೆರಡು ಆರ್ಚಿಡ್‌ಗಳನ್ನು ತಂದಭಾಗ ಅದು. ಆದರೆ ಅವರಾರೂ ಅವನು ಕಥೆಯನ್ನು ಮೊಟಕುಮಾಡಿದುದನ್ನು ಗಮನಿಸಿ ದಂತೆ ತೋರಲಿಲ್ಲ. ಹಳದಿ ಕಣ್ಣಿನ ಹುಲಿಯ ರಾಜ್ಯಕ್ಕೆ ಪ್ರವೇಶಿಸಿ ಬಂದ ಅವನ ಸಾಹಸದಿಂದ ಆಶ್ಚರ್ಯಗೊಂಡ ವಾಸಂತಿ, ದಾಸನ್ ಅರಳಿದ ಕಣ್ಣುಗ ಳಿಂದ ಅವನಿಗೆ ಹಲವು ಪ್ರಶ್ನೆಗಳನ್ನು ಹಾಕಿದರು.

ಊಟವಾದ ಮೇಲೆ ವಾಸಂತಿ ಮಾರಿಯಮ್ಮನನ್ನು ಕರೆಯಲು ಓಡಿದಳು. ಬಿಸಿಲಿನ ಕೊನೇ ಕಿರಣಗಳು ಇನ್ನು ಸ್ವಲ್ಪ ಇದ್ದವು. ಆದರೆ ಮಾರಿಯಮ್ಮ ತಾನೊಬ್ಬಳೇ ಬರಲಿಲ್ಲ. ಅವಳೊಡನೆ ಜೇಸುದಾಸನ್ನನು ತಾನೇ ಬಂದ–

ಎಂದಿನಂತೆ ಕೈಗಳನ್ನು ಚೆಡ್ಡಿಯ ಜೇಬುಗಳಲ್ಲಿ ಬಿಟ್ಟು ಶಿಳ್ಳೆ ಹಾಕುವಂತೆ ತುಟಿಗಳನ್ನು ಸ್ವಲ್ಪ ಮಡಿಸಿ ಸ್ವಲ್ಪ ಠೀವಿಯಿಂದಲೇ ಅವನು ನಡೆಯುತ್ತ ಬಂದ.

ತೊಡಕಿನಿಂದ ಹುಡುಗರಿಬ್ಬರೂ ಪರಸ್ಪರರನ್ನು ನೋಡಿದರು. ಕೊನೆಗೆ ಮೌನಮುರಿದು ಜೇಸುದಾಸನ್ನನೇ ಮಾತಾಡಿದ.

"ವಾಸಂತಿಗೆ ನೀನು ಓದಲು ಹೇಳಿಕೊಡುತ್ತಿದ್ದು ತನಗೂ ಹೇಳಿಕೊಡುತ್ತೀಯೆಂದು ಮಾರಿಯಮ್ಮ ಹೇಳಿದಳು" ಎಂದು ಅವನು ನಿಧಾನವಾಗಿ ನುಡಿದ.

"ಹೌದು" ರಾಮನ್ನನೂ ಮೃದುವಾಗಿಯೇ ಹೇಳಿದ. "ಇನ್ನೂ ತುಂಬಾ ಚಿಕ್ಕವನಿದ್ದರೂ ದಾಸನ್‌ಗೆ ಕೂಡಾ ಹೇಳಿಕೊಡುತ್ತಿದ್ದೇನೆ." ಜೇಸುದಾಸನ್ನನ ದನಿಯ ರೀತಿ ಅವನಿಗೆ ವಿಚಿತ್ರವಾಗಿ ಕಾಣಿಸಿತು. ಕಳೆದ ತಿಂಗಳುಗಳಲ್ಲಿ ಆ ದನಿ ಎಷ್ಟೋ ಬಾರಿ ತನ್ನನ್ನು ಅಣಕಿಸಿ "ಪುಸ್ತಕದ ಹುಳು! ಇವನೊಬ್ಬ ಪಂಡಿತ! ಹೋ, ನೋಡಿ ಪಂಡಿತ ಹೋಗುತಿದ್ದಾನೆ" ಎಂದು ಕೂಗುತ್ತಿದ್ದುದನ್ನು ಅವನು ಕೇಳಿದ್ದ. ಆದರೆ ಇಂದು ಆ ದನಿಯಲ್ಲಿ ಅಣಕವಿರಲಿಲ್ಲ.

ಜೇಸುದಾಸನ್ ದೃಢವಾಗಿ ಕಾಲುಗಳನ್ನಗಲಿಸಿ ನಿಂತು ಕೈಗಳನ್ನು ಸೊಂಟದಹಿಂದೆ ಇಟ್ಟು ನೇರವಾಗಿ ರಾಮನ್‌ನನ್ನು ನೋಡಿದ. "ರಾಮನ್, ನನಗೂ ಹೇಳಿಕೊಡುತ್ತೀಯಾ?" ಎಂದು ಅವನು ಕೇಳಿದ.

ಅಚ್ಚರಿಗೊಂಡು ರಾಮನ್ ಉತ್ತರ ಹೇಳಲು ಬಾಯ್ದೆರೆದ. ಇನ್ನೂ ಅವನಿಗೆ ಆ ಕೆಣಕಾಟ ದನಿಯೇ ಕೇಳಿ ಬರುತ್ತಿತ್ತು. ಆದರೆ ಜೇಸುದಾಸನ್ನನ ಒರಟು ದನಿಯ ಹಿಂದಿದ್ದ ಕೇಳಿಕೆಯನ್ನು ಗಮನಿಸಿದ ರಾಮನ್ ಏನೂ ಹೇಳದೆ ಸುಮ್ಮನಾದ.

"ನೀನು ಅದೃಷ್ಟವಂತ ರಾಮನ್", ಜೇಸುದಾಸನ್ ಮಾತು ಮುಂದುವರಿಸಿದ, ಅವನ ಕೈಗಳು ಪಕ್ಕಕ್ಕೆ ಇಳಿಬಿದ್ದಿದ್ದವು, ಅವನ ದೃಷ್ಟಿ ರಾಮನ್‌ನ ಆಚೆಗೆ ದೂರದಲ್ಲೆಲ್ಲೋ ನೆಟ್ಟಿತ್ತು. "ಈ ಪ್ರಾಂತ್ಯದಲ್ಲೆಲ್ಲಾ ಶಾಲೆಗೆ ಹೋಗುವವನು ನೀನೊಬ್ಬನೆ. ಓದಲು ಕಲಿಯುವುದಕ್ಕೆ ಅವಕಾಶವಿದ್ದವನು ನೀನೊಬ್ಬನೇ. ನಿನ್ನಿಂದ ಓದಲು ಕಲಿಯಬೇಕೆನ್ನುವವರು ನಾನೊಬ್ಬನೇ ಅಲ್ಲ ಬೇರೆಯವರೂ ಇದ್ದಾರೆ: ಸೆಲ್ಲಂ, ಮುತ್ತು, ಲಕ್ಷ್ಮಣ" ಬೇರೆ ಹುಡುಗರ ಹೆಸರುಗಳನ್ನು ಹೇಳಿದ. "ನೀನು ಓದುತ್ತೀಯೆಂದ ಮಾತ್ರಕ್ಕೆ ನಮಗಿಂತ ಉತ್ತಮನೆಂದು ನೀನು ಯೋಚಿಸಬೇಕಾಗಿಲ್ಲ" ಥಟ್ಟನೆ ಜೇಸುದಾಸನ್ ಮುಂಚಿನ ಅಟಾ

ಟೋಪದಿಂದ ಹೇಳಿದ.

ರಾಮನ್ ಕೂಡಲೆ ಉತ್ತರಿಸಿದ: "ಇಲ್ಲ, ಹಾಗಲ್ಲ. ನಾನಂ ಅದೃಷ್ಟ ವಂತ ಅಷ್ಟೆ"

"ನಾವು ಪಟ್ಟಣದಲ್ಲಿ ಶಾಲೆಗೆ ಹೋಗುವಂತಿಲ್ಲ" ಜೇಸುದಾಸನ್ ಮುಂದುವರಿಸಿದ "ಆದರೆ ಸಂತೆಗಳಲ್ಲಿ ನಮ್ಮ ಕೆಲಸ ಮುಗಿದ ಮೇಲೆ ವಾಸಂತಿ ದಾಸನ್‌ರಿಗೆ ಹೇಳಿಕೊಡುವಂತೆ ನೀನು ನಮಗೂ ಪಾಠ ಹೇಳಿಕೊಡುವು ದಾದರೆ–"

ರಾಮನ್ ಮೌನವಾಗಿದ್ದ. ಅದು ತನ್ನಿಂದ ಸಾಧ್ಯವಾದೀತೇ ಎಂದು ಯೋಚಿಸಿದ. ಅಷ್ಟೊಂದು ಜನರಿಗೆ ಪಾಠ ಹೇಳುವುದು ಹೇಗೆ? ನನ್ನ ಬಳಿ ಸಾಕಷ್ಟು ಪುಸ್ತಕಗಳಿಲ್ಲ. ಆದರೆ ನೆಲದಮೇಲೆ ಬರೆದು ಓದಬಹುದು. ಪ್ರಾಯಶಃ ಶಾಲಾ ಮಾಸ್ತರು ಮುನಿಸ್ವಾಮಿ ಓದಲು ಕೆಲವು ಹಳೇ ಪುಸ್ತಕಗಳನ್ನು ಕೊಟ್ಟು ಸಹಾಯಮಾಡಬಹುದು,

ಒಂದರೊಡನೊಂದು ಯೋಚನೆಗಳು ಅವನನ್ನು ಮುತ್ತಿದವು. ಅವನಲ್ಲಿ ಉದ್ವೇಗ ಏರತೊಡಗಿತು. ಅವನು ಆ ಕೆಲಸ ಮಾಡಲು ಸಾಧ್ಯ; ಮಾಡುತ್ತೇನೆ; ತಾನು ಉಪಾಧ್ಯಾಯನಾಗುತ್ತೇನೆ. ಅವನ ಯೋಚನೆಗೆ ಅವನೇ ನಕ್ಕ. ಶಾಲಾ ಮಾಸ್ತರಲ್ಲ. ಆದರೂ ಶಿಕ್ಷಕ.

ಹಠಾತ್ತನೆ ಅವನು ಪ್ರಕಟಿಸಿದ: "ಆಗಲಿ. ಹೇಳಿಕೊಡುತ್ತೇನೆ.ನಾಳೆ ಸಂಜೆ ಬರುವಂತೆ ಉಳಿದವರಿಗೂ ಹೇಳು. ನಾವು ಇಲ್ಲೇ ಓದಬಹುದು: ಬರೆಯಲು ನೆಲ ಮಟ್ಟಸವಾಗಿದೆ. ಎಲ್ಲರಿಗೂ ಕೂಡಲು ಜಾಗವೂ ಇದೆ. ನನ್ನ ಬಳಿ ಅಷ್ಟೊಂದು ಮಂದಿಗೆ ಪುಸ್ತಕಗಳಿಲ್ಲ. ಆದರೆ ಇಲ್ಲೇ ನೆಲದ ಮೇಲೆ ಬರೆದು ಓದುತ್ತಾ ಆರಂಭಿಸಬಹುದು. ಆದರೆ ಇನ್ನೂ ಬಿಸಿಲಿರುವಾಗಲೇ ಸಮಯಕ್ಕೆ ಸರಿಯಾಗಿ ಬರಬೇಕು. ಆಮೇಲೆ ನಾವೆಲ್ಲರೂ ತಾತ ನಟೇಶನ್ನನ ಬೆಂಕಿಗೋಷ್ಠಿಗೆ ಹೋಗೋಣ."

"ನಾಳೆ ನಾವು ಇಲ್ಲಿಗೆ ಬರುತ್ತೇವೆ. ನಾನು ಉಳಿದವರಿಗೆ ಹೇಳುತ್ತೇನೆ" ಎಂದು ಜೇಸುದಾಸನ್ ಭರವಸೆಯಿತ್ತ.

ಅವನು ಬಳಸು ಹಾದಿ ಹಿಡಿಯದೆ ನೆಗೆದು ಹತ್ತುತ್ತ ಇಳಿಜಾರನ್ನೇರತೊಡಗಿದುದನ್ನೇ ನೋಡುತ್ತ ನಿಂತಿದ್ದ ರಾಮನ್ ಆಳವಾಗಿ ನಿಟ್ಟುಸಿರೆಳೆದ.

ಒಂದು ಗಾಯ ಆರಿ ವಾಸಿಯಾದಂತಿತ್ತು. ಬಹುದಿನಗಳಿಂದ ಇಲ್ಲದಿದ್ದಂಥ ಒಂದು ಸಂತೃಪ್ತಿಯ ಭಾವನೆಯ ಅನುಭವವಾಯಿತು ಅವನಿಗೆ.

ತಾನು ಮತ್ತೆ ತಾತ ನಟೇಶನ್ನನ ಬೆಂಕಿ ಗೋಷ್ಠಿಗೆ ಹೋಗುತ್ತೇನೆ. ಹಳದಿ ಕಣ್ಣಿನ ಹುಲಿಯ ಕಥೆ ಬರೀ ಕಟ್ಟುಕಥೆಯಾಗಿದ್ದು ಮುದುಕನ ಮಾಂತ್ರಿಕವಾದ ಬಣ್ಣನೆಯಿಂದ ನಿಜವೆನಿಸುವಂತಿದ್ದರೂ ರಾಮನ್ ಇನ್ನು ಮುಂದೆ ತಾನು ತಾತ ನಟೇಶನ್ನನ ಕಥೆಗಳನ್ನು ಧಿಕ್ಕರಿಸುವುದಿಲ್ಲವೆಂದುಕೊಂಡ. ನಿಜವೋ ಸುಳ್ಳೋ ಅದೂ ತನ್ನಂತೆ ಬೆಟ್ಟಗಳಿಗೆ ಸೇರಿದ್ದು, ಅದರಿಂದಲೇ ಅವು ಮುಖ್ಯ.

ಕತ್ತಲಾಗುತ್ತ ಬಂದಿತ್ತು, ವಾಸಂತಿಯೊಡನೆ ಒಂದೆರಡು ಪುಟ ಓದಲು ಸಾಧ್ಯವಾದೀತಷ್ಟೆ. ರಾಮನ್ ವಾಸಂತಿಗೂ. ದಾಸನ್‌ಗೂ ನಡುವೆ ಕುಳಿತು ಮಾರಿಯಮ್ಮ ವಾಸಂತಿಯ ಹೆಗಲ ಮೇಲಿಂದ ಇಣಕಿನೋಡುತ್ತಿದ್ದಳು. ವಾಸಂತಿ ಚೆನ್ನಾಗಿ ಓದಿದಳು. ದಾಸನ್ ಕೂಡಾ ತಮಿಳು ಲಿಪಿಯ ಒಂದೊಂದು ಅಕ್ಷರ, ಚುಕ್ಕೆ, ಸುತ್ತಿನ ಮೇಲೂ ಬೆರಳಿರಿಸಿ ಕೆಲವು ಪದಗಳನ್ನು ಹೇಳುತ್ತಿದ್ದ,

ಪಾಠ ಮುಗಿದ ಮೇಲೆ ಎಷ್ಟೋ ಹೊತ್ತು ರಾಮನ್ ಹೊರಗಡೆಯೇ ಕುಳಿತು ಮೊಣಕಾಲುಗಳನ್ನು ಮೇಲಕ್ಕೆ ಮಡಿಸಿ ಗಲ್ಲವನ್ನು ಅವುಗಳ ಮೇಲಿಟ್ಟು ಕತ್ತಲೆಯಲ್ಲಿ ದಿಟ್ಟಿಸುತ್ತ ಕುಳಿತಿದ್ದ. ತಾನು ಮಾಡಲಿದ್ದುದನ್ನು ಮರ್ಕಿನಮ್ಮನಿಗೆ ಹೇಳುವಂತಿದ್ದಿದ್ದರೆ–ಎಂದು ಆಸೆಪಟ್ಟ. ಆ ದಿನ ತನ್ನ ಮನೆಯಲ್ಲಿ ಓದಲು ಕಲಿತ ಮೊದಲಿಗ ತಾನೆಂದಾಗ ಆಕೆಯ ಮೇಲೆ ಅಷ್ಟೊಂದು ಪರಿಣಾಮವಾದಂತೆ ಕಾಣಲಿಲ್ಲ, ಆಕೆ ಏನು ಹೇಳಿದ್ದು? "ಅದು ದೊಡ್ಡ ಜವಾಬ್ದಾರಿ".ದೊಡ್ಡ ಸಾಧನೆ ಅಥವಾ ಆ ರೀತಿಯ ಮತ್ತೇನು ಮಾತುಗಳನ್ನೂ ಆಕೆ ಹೇಳಲಿಲ್ಲ. "ದೊಡ್ಡ ಜವಾಬ್ದಾರಿ". ಹಾಗೆ ಹೇಳುವುದು ವಿಚಿತ್ರವೆನಿಸಿ ಅವನಿಗೆ ನಿರಾಶೆಯಾಗಿತ್ತು.

ತಾನು ಪಾಠ ಹೇಳುವುದನ್ನು ತಿಳಿದರೆ ಆಕೆಗೆ ಸಂತೋಷವಾಗುವುದು ಎಂದು ರಾಮನ್ ಯೋಚಿಸಿದ. ಅದೇನು ಅಂಥ ದೃಢ ನಂಬಿಕೆ? ಮರ್ಕಿನಮ್ಮ ತನ್ನ ಬಗ್ಗೆ ಒಳ್ಳೆಯ ಭಾವನೆ ಹೊಂದಿರುವುದು ಅದೇಕೆ ಅಷ್ಟು ಮುಖ್ಯ ? ಆ ದಿನ ಆಕೆ ತನ್ನ ಶಾಲೆಯ ವಿಷಯ ಹೇಳಿದುದನ್ನು ಜ್ಞಾಪಿಸಿಕೊಂಡ:"–ನಾವು

ಅನೇಕ ವಿಷಯಗಳನ್ನು ಹೇಳಿಕೊಡುತ್ತೇವೆ, ರಾಮನ್–ಬರೀ ಓದು ಬರಹ ಅಷ್ಟೇ ಅಲ್ಲ, ಬೇಸಾಯಮಾಡುವುದು. ಒಳ್ಳೇ ಮನೆಗಳನ್ನು ಕಟ್ಟುವುದು.... ಆಮೇಲೆ ನಮ್ಮ ಶಾಲೆಯಲ್ಲಿ ಕಲಿತವರು ತಮ್ಮ ಹಳ್ಳಿಗಳಿಗೆ ಹಿಂದಿರುಗಿ ಬೇರೆಯವರಿಗೆ ಕಲಿಸುವರು, ಅದರ ನಿಜವಾದ ಮಹತ್ವ ಅದೇ."

ತಾನು ಮಾಡಲಿದ್ದುದೂ ಅದೇ ತಾನೇ ? ಈಗಾಗಲೆ ಅವನು ಶಾಲೆಯಲ್ಲಿ ಸಾಕಷ್ಟು ಕಲಿತಿದ್ದಾನೆ. ಪುನಃ ಹೋದಾಗ ಇನ್ನೂ ಹೆಚ್ಚಿಗೆ ಕಲಿಯುತ್ತಾನೆ. ಈಗ ಇತರರಿಗೂ ಹೇಳಿಕೊಡುತ್ತಾನೆ. ಮುಂದಿನ ವರ್ಷ ಮರ್ಕಿನಮ್ಮ ಬಂದಾಗ ಅವನು ಈವಿಷಯ ಆಕೆಗೆ ತಿಳಿಸುತ್ತಾನೆ."ಪ್ರಾಯಶಃ ನನ್ನ "ತರಗತಿ"ಯನ್ನೂ ಆಕೆಗೆ ತೋರಿಸಿಯೇನು" ಆಗ ಆಕೆ "ಅದು ನಿಜವಾದ ಸಾಧನೆ" ಎಂದಾಳು.



ರಾಮನ್ ಎದ್ದು ಮೈಮುರಿದು ಒಳಕ್ಕೆ ನಡೆದ. ತನ್ನ ತಾಳೆ ಚಾಪೆಯನ್ನು ಹರವಿ ಹೊದಿಕೆ ಹೊದೆದುಕೊಂಡು ಮುದುಡಿ ಮಲಗಿಕೊಂಡ. ಅವ

ನಿಗೆ ಆಯಾಸವಾಗಿತ್ತು, ಮೈಕೈ ನೋಯುತ್ತಿತ್ತು. ಆದರೆ ನಿದ್ರೆ ಬರಲಿಲ್ಲ.

ಉದ್ರೇಕದಿಂದಿರಬೇಕು ಎಂದುಕೊಂಡ ಅವನು. ಆರ್ಚಿಡ್ ಪತ್ತೆಮಾಡಿದುದರಿಂದ ಆದ ಆವೇಗ. ಅಥವಾ ಪಾಠ ಹೇಳುವ ಮತ್ತು ಜೇಸುದಾಸನ್ ನೊಡನೆ ಪುನಃ ಸ್ನೇಹವುಂಟಾದುದರಿಂದ ಮೂಡಿದ ಉದ್ವಿಗ್ನತೆ, ಇಲ್ಲ. ಅದಕ್ಕೂ ಹೆಚ್ಚಿನದೇನೋ ಇದೆ. ಹಾಂ! ಆ ಪುಸ್ತಕ. ಇಷ್ಟುಬೇಗ ಹೇಗೆ ಮರೆತುಹೋಗಿತ್ತು? ಇನ್ನು ಕೆಲ ಗಂಟೆಗಳಲ್ಲಿ ಆ ಪುಸ್ತಕ ತನ್ನದಾಗುವುದು.

ಅವನು ಕಣ್ಣುಗಳನ್ನು ಮುಚ್ಚಿಕೊಂಡ. ಮನದಲ್ಲಿ ಆ ಚಿತ್ರ ಸ್ಪಷ್ಟವಾಗಿ ಮೂಡಿತು. ಹೊಳೆಯುವ ಕಪ್ಪು ಹೊದಿಕೆ. ಅದರ ಮೇಲೆ ಚಿನ್ನದ ಅಕ್ಷರಗಳಲ್ಲಿ ಹೆಸರು. ಒಳಗಡೆ, ಭವ್ಯವಾದ ಚಿತ್ರಗಳು, ರಾಕ್ಷಸ ರಾಜನೊಡನೆ ಹೋರಾಡಿದ ರಾಮನ ಚಿರಸ್ಮರಣೀಯ ಸಾಹಸಗಳನ್ನು ಬಣ್ಣಿಸಿದ ತಮಿಳು ಸಾಲುಗಳು.

ಅಪ್ಪ ನೋಡಲಿ, ತನ್ನ ಪಂಡಿತ–ಪುತ್ರನ ಬಗ್ಗೆ ಆತ ಅದೆಷ್ಟು ಹೆಮ್ಮೆ ಪಡುತ್ತಾನೆ ಎಂದು ರಾಮನ್ ಯೋಚಿಸಿದ. ಆದರೆ ಅಷ್ಟು ಹೆಚ್ಚು ಬೆಲೆಯ ಪುಸ್ತಕ ಕೊಂಡುದನ್ನು ತಂದೆಗೆ ವಿವರಿಸುವುದು ಹೇಗೆ?

ಅದರ ಬೆಲೆ ಎಷ್ಟೆಂದು ಆತನಿಗೆ ತಿಳಿಯುವುದಿಲ್ಲ–ಎಂದು ರಾಮನ್ ತನಗೆ ತಾನೇ ಹೇಳಿಕೊಂಡ; ಆದರೆ ಆ ಪ್ರಶ್ನೆ ಅವನನ್ನು ಕಾಡುತ್ತಲೇ ಇತ್ತು.

ಪ್ರಾಯಶಃ ಸ್ವಲ್ಪಕಾಲ ಪುಸ್ತಕವನ್ನು ಬಚ್ಚಿಟ್ಟಿರಬೇಕಾಗಬಹುದು; ನಿಜವಾಗಿ ಬಚ್ಚಿಡುವುದೆಂದಲ್ಲ. ತನ್ನ ಮೂಲೆಯಲ್ಲಿ ತನ್ನ ಪುಸ್ತಕಗಳಡಿಯಲ್ಲೋ ಚಾಪೆಯಲ್ಲಿ ಸುತ್ತಿಯೋ ಇಟ್ಟಿರುವುದು. ಅವನ್ನು ಬೇರೆಯವರಾರೂ ಮುಟ್ಟುವುದಿಲ್ಲ. ಇನ್ನು ತಾನು ಪುಸ್ತಕ ಓದುವಾಗ ಹೇಗಿದ್ದರೂ ಅದನ್ನೆತ್ತಿಕೊಂಡು ಒಬ್ಬನೇ ಹೊರಕ್ಕೆ ಹೋಗುತ್ತಾನೆ. ನಿರಾತಂಕವಾಗಿರಲು ಅಪ್ಪ ಇದನ್ನು ಪತ್ತೆ ಮಾಡಿದಾಗ ಪಂಡಿತರಂತೆ ತನ್ನ ಮಗ ನಿಜವಾದ ಪುಸ್ತಕ ಕೊಂಡಿದ್ದಾನೆಂದು ಹರ್ಷಪಡುವುದು ಖಂಡಿತ. ಅವೊತ್ತು ಬಸ್ ನಿಲ್ದಾಣದಲ್ಲಿ ತಂದೆ ಹೇಳಲಿಲ್ಲವೆ? "ನಾನು ನಿನ್ನ ವಯಸ್ಸಿನಲ್ಲಿದ್ದಾಗ ನಾನೂ ಮರಕಡಿಯುವವನಿಗಿಂತ ಹೆಚ್ಚಿಗೆ ಏನಾದರೂ ಆಗಬೇಕೆಂದು ಕನಸು ಕಂಡಿದ್ದೆ....ಹಾಗೇ ಕನಸು ಕಾಣುತ್ತಿರು. ರಾಮನ್. ಸರ್ವಪ್ರಯತ್ನದಿಂದ ಅದನ್ನುಳಿಸಿಕೋ . .."ರಾಮನ್ ಮಾಡುತ್ತಿ

ದ್ದುದೂ ಅದನ್ನೇ ಅಲ್ಲವೆ?

ಆದರೆ ಅವನಿಗಿಷ್ಟವಿಲ್ಲದಿದ್ದರೂ ತಂದೆಯಾಡಿದ್ದ ಉಳಿದ ಮಾತುಗಳೂ ತನ್ನ ಯೋಚನೆಗಳನ್ನು ಬದಿಗೆ ದೂಡಿ ಮನಸ್ಸಿಗೆ ಬಂದವು; "ಹುಷಾರಾಗಿರು. ಈಗ ಇತರರಿಗೂ ನೀನೇ ಹೊಣೆ. ನಾನಿಲ್ಲದಾಗ ನೀನೇ ಮನೆ ಯಜಮಾನ. ಸದ್ಯಕ್ಕೆ ಮುಖ್ಯವಾಗಿ ಸಂಪಾದಿಸುವವನೂ ನೀನೇ. ಎಲ್ಲವನ್ನೂ ನಿನಗೆ ಬಿಟ್ಟಿದ್ದೇನೆ"

ಇದ್ದಕ್ಕಿದ್ದಂತೆ ತನಗೇ ಅರಿವಿಲ್ಲದಂತೆ ರಾಮನ್ ಕಂಬಳಿಯನ್ನು ಪೂರ್ತಿ ತಲೆ ಮೇಲಕ್ಕೆಳೆದುಕೊಂಡ. ಬಿಕ್ಕತೊಡಗಿ ಅವನ ತೆಳ್ಳನೆಯ ಭುಜಗಳು ಅದುರಿದವು. ಕಣ್ಣೀರಿಲ್ಲದೆ ತುಂಬಾ ಬಿಕ್ಕಿಬಿಕ್ಕಿ ಕೊನೆಗೆ ಅವನು ನಿದ್ರೆಹೋದ.

# ೧೬

ಮಾರನೇ ದಿನ ಬೆಳಗ್ಗೆ ಊಟ ಮುಗಿಯುವುದೇ ತಡ. ರಾಮನ್ ಪೇಟೆಗೆ ನಡೆದ. ಷರ್ಟಿನ ಅಂಚಿನಲ್ಲಿ ತಾನು ಮನೆಯಲ್ಲಿ ಬಚ್ಚಿಟ್ಟಿದ್ದ ನಾಣ್ಯಗಳನ್ನು, ಮರ್ಕಿನಮ್ಮ ಉಳಿದೆರಡು ಆರ್ಚಿಡ್‌ಗಳಿಗೆ ಕೊಟ್ಟಿದ್ದ ಎರಡು ರೂಪಾಯಿನ ಮೂರು ನೋಟುಗಳನ್ನು ಗಂಟುಹಾಕಿದ್ದ. ನಡೆಯುತ್ತಿದ್ದಂತೆ ಹಣದ ಗಂಟು ಮೈಗೆ ತಾಗುತ್ತಿದ್ದುದನ್ನು ಗಮನಿಸಿದ. ಅಕ್ಕಪಕ್ಕಗಳತ್ತ ದೃಷ್ಟಿ ಹಾಯಿಸದೆ ನೇರವಾಗಿ ಹೆಜ್ಜೆ ಹಾಕುತ್ತ ನಡೆದ, ಎಷ್ಟೋ ದಿನಗಳಿಂದ ತಾನು ಕನಸು ಕಾಣುತ್ತಿದ್ದ ದಿನ ಇದು. ಪುಸ್ತಕ ತನ್ನದಾಗುವ ದಿನ.

ಅದೆಷ್ಟೋ ಸಲ ಈ ದಿನವನ್ನು ಮನಸ್ಸಿನಲ್ಲೇ ಚಿತ್ರಿಸಿಕೊಂಡಿದ್ದ. ಆದರೂ ಅವನ ಹೆಜ್ಜೆಗಳನ್ನು ಹಗುರ ಮಾಡಿ ರೆಕ್ಕೆಗಳಿರುವ ರಥದಲ್ಲಿ ಬೆಟ್ಟದ ಸುತ್ತುದಾರಿಯಲ್ಲಿ ಹಾರಿ ಬಂದಂತಾಗುವ ಆವೇಗವೇನೂ ಇಂದು ಅವನಿಗಿರಲಿಲ್ಲ. ಇದು ನಿಜವೆಂದು ಅವನಿಗಿನ್ನೂ ನಂಬಿಕೆಯಿಲ್ಲದಿದ್ದುದರಿಂದಲೋ? ಹೌದು, ನಿಜವಾಗಿ ಅದೇ. ಇದೆಲ್ಲಾ ಇನ್ನೊಂದು ಕನಸಿನಂತಿತ್ತು.

ಅವನು ರಸ್ತೆ ಪಕ್ಕದಲ್ಲಿ ನಿಂತ. ಯಾರೂ ಕಾಣಲಿಲ್ಲ. ಷರಟಿನ ತುದಿಯನ್ನು ಹೊರಕ್ಕೆಳೆದು ಹಣವಿದ್ದ ಗಂಟನ್ನು ಬಿಚ್ಚತೊಡಗಿದ. ಅದೇಕೆ ಕೈಬೆರಳುಗಳು ಹೀಗೆ ನಡುಗುತ್ತಿವೆ? ಗಂಟು ಬಿಚ್ಚಿದ ಮೇಲೆ ಎರಡು ರೂಪಾಯಿನ ಮೂರು ನೋಟುಗಳನ್ನು ತೆಗೆದು ಅವುಗಳ ಮಡಿಕೆಗಳನ್ನು ಬಿಚ್ಚಿ ಅವುಗಳ ಮೇಲೆ ಕೈಯಾಡಿಸಿದ. ತನ್ನ ಕೈಯಲ್ಲಿದ್ದ ಆರು ರೂಪಾಯಿ ನೋಡಿ ಇದೆಲ್ಲಾ ನಿಜ ಎಂದನ್ನಿಸಿತು, ನೋಟುಗಳನ್ನು ಹಲ್ಲುಗಳಲ್ಲಿ ಕಚ್ಚಿ ಹಿಡಿದು ನಾಣ್ಯಗಳಿದ್ದ ಗಂಟನ್ನು ಮತ್ತೆ ಬಿಗಿದ. ಒಂದು ಕೈಯಲ್ಲಿ ನೋಟುಗಳನ್ನು ಹಿಡಿದು ಮುಂದಕ್ಕೆ ನಡೆದ,

ಪೇಟೆ ಬೀದಿ ಪ್ರವೇಶಿಸಿ ಅವನು ಬಸ್‌ಸ್ಟಾಂಡ್ ಹಾಯ್ದು ಬಂದ.

ಮುಂಜಾನೆ ಬಸ್ಸು ಆಗಲೇ ಹೊರಟು ಹೋಗಿತ್ತು; ಮರ್ಕಿನಮ್ಮನನ್ನು ಕಂಡು ತಾನು ಪಾಠ ಹೇಳಲಿದ್ದ ವಿಷಯ ತಿಳಿಸಬೇಕೆಂದು ಅವನು ಅಂದುಕೊಂಡಿದ್ದುದು ಈಗ ಹೊಳೆಯಿತು. ಆದರೆ ಚಿಂತೆಯಿಲ್ಲ. ಮುಂದಿನ ವರ್ಷ ಹೇಗೂ ಆಕೆಯನ್ನು ನೋಡುವುದಾಗುತ್ತದೆ, ಈಗ ಮುಖ್ಯವಾದುದು ಪುಸ್ತಕ.

ಕೆಳಗಡೆಗೆ ತಂಬುಸ್ವಾಮಿಯ ತಗಡಿನಂಗಡಿ ಗೋಚರವಾಯಿತು, ಸ್ವಲ್ಪ ಸಮೀಪಿಸಿದಂತೆ ಅಂಗಡಿಯ ತೆರೆದ ಮುಂಭಾಗ. ಒಳಗಡೆ ತಂಬುಸ್ವಾಮಿ ಗಾಜಿನ ಬೀರು ಒರಸುತ್ತಿದ್ದುದು ಎಲ್ಲವೂ ಕಾಣಿಸಿತು.

ಆತನಿಗೆ ಎಷ್ಟು ಆಶ್ಚರ್ಯವಾಗುವುದು ಎಂದುಕೊಂಡ ರಾಮನ್. ಆತ ತನ್ನನ್ನು ನಂಬುವುದೇ ಇಲ್ಲ, ಬೇಗ ನಡೆಯಬೇಕೆಂದುಕೊಂಡ. ಆದರೆ ರಸ್ತೆ ತುಂಬಾ ಕಡಿದಾಗಿದ್ದು ಒಂದೊಂದು ಹೆಜ್ಜೆಗೂ ಅವನ ಹೊಟ್ಟೆಯನ್ನು ಹಿಂಡಿ ಅಲ್ಲಾಡಿಸುವಂತಿತ್ತು. ಹೃದಯ ಹೆಚ್ಚು ಜೋರಾಗಿ ಬಡಿದುಕೊಳ್ಳದಿರಲೆಂದು ನಿಧಾನವಾಗಿಯೇ ನಡೆಯತೊಡಗಿದ.

ಈಗ ರಾಮನ್ ಅಂಗಡಿಯನ್ನು ಸಮೀಪಿಸಿದ. ತಂಬುಸ್ವಾಮಿ ರಸ್ತೆಯತ್ತ ಓರೆನೋಟದಿಂದ ನೋಡುತ್ತಿದ್ದುದು ಕಾಣಿಸಿತು. ಇನ್ನೊಂದು ಕ್ಷಣದಲ್ಲಿ ಆತ ರಾಮನ್‌ನನ್ನು ನೋಡುತ್ತಾನೆ. ಆಗ ರಾಮನ್–

ಆಗ ಒಂದು ವಿಚಿತ್ರ ಘಟನೆ ಸಂಘಟಿಸಿತು. ರಾಮನ್‌ನ ಕಣ್ಣು ಮಂಜಾಯಿತು. ತಂಬುಸ್ವಾಮಿ ಮತ್ತು ಅವನ ಅಂಗಡಿ ಕಾಣದಾಗಿ ಅದರ ಬದಲು ಅಂದು ಬೆಳಿಗ್ಗೆ ಇದ್ದ ರೀತಿಯಲ್ಲಿ ತನ್ನ ಮನೆಯ ದೃಶ್ಯ ಕಂಡಿತು. ಮೂಲೆಯಲ್ಲಿ ತಾಯಿ ಬೆಳಗಿನ ಅಡಿಗೆಗಿಟ್ಟು ಒಲೆಯನ್ನು ಊದುತ್ತಿದ್ದಳು. ಆಕೆಯ ಪಕ್ಕದಲ್ಲಿ ಮಗು ಚಾಪೆಯಮೇಲೆ ಕಾಲೊದರುತ್ತ ಮಲಗಿತ್ತು, ನೆಲದ ಮೇಲೆ ವಾಸಂತಿ ಮತ್ತು ದಾಸನ್ ಇನ್ನೂ ಮಲಗಿದ್ದರು. ಹರಿದ ಕಂಬಳಿಯನ್ನೂ ಅದರಿಂದೀಚೆಗೆ ಕಾಣುತ್ತಿದ್ದ ವಾಸಂತಿಯ ಕಾಲನ್ನೂ ನೋಡಿದ. ಹಿಂದಿನ ದಿನ ತಾಯಿ ತನ್ನತ್ತ ನೋಡಿ ನಕ್ಕಿದ್ದನ್ನು ಆಕೆಯ ಕಣ್ಣುಗಳಲ್ಲಿದ್ದ ಹೆಮ್ಮೆಯನ್ನು ಕಂಡ.

ರಾಮನ್ ತಂಬುಸ್ವಾಮಿಯ ಅಂಗಡಿಯ ಮುಂದೆ ನಿಂತು ಮುದುಕ ವ್ಯಾಪಾರಿಯ ಅಚ್ಚರಿಗೊಂಡ, ಸುಕ್ಕುಗಟ್ಟಿದ ಮುಖ ನೋಡಿದ. ಆರು ರೂಪಾಯಿ ಹಿಡಿದಿದ್ದ ಕೈಯನ್ನು ಮುಂದೆ ಚಾಚಿ “ಪುಸ್ತಕ ಕೊಳ್ಳಲು ಬಂದಿ

ದ್ದೇನೆ, ತಾತ" ಎನ್ನಲು ಬಾಯ್ತೆರೆದ ; ಆದರೆ ಮಾತುಗಳೇ ಹೊರಬೀಳದಾದವು.

"ನಾನೂ ಹೋಗಿ ಬರುತ್ತೇನೆ" ಎಂದು ರಾಮನ್ ಹಿಂದಿರುಗಿ ರಸ್ತೆಯಲ್ಲಿ ಕೆಳಕ್ಕೋಡಿದ. ಕೆಲವಂಗಡಿಗಳಾಚೆ ಒಂದು ಬಟ್ಟೆ ಅಂಗಡಿ ತೆರೆದಿತ್ತು. ಅಂಗಡಿಯಲ್ಲಿ ಗೋಡೆಗಳುದ್ದಕ್ಕೂ ಇದ್ದ ಗಾಜಿನ ಬೀರುಗಳನ್ನು, ಇವುಗಳಲ್ಲಿದ್ದ ಬಣ್ಣ ಬಣ್ಣದ ಬಟ್ಟೆಗಳನ್ನು ನೋಡಿದ.

"ಏನು, ತಂಬಿ. ಏನು ಬೇಕು ?" ಎಂದು ಅಂಗಡಿಯವನು ಕೇಳಿದ.

"ನನಗೊಂದು ಕಂಬಳಿ ಬೇಕು" ತನ್ನ ದನಿಯೇ ಎಲ್ಲೋ ದೂರದಿಂದ ಬಂದಂತಾಯಿತು. "ಬೆಚ್ಚಗಿರುವ ಉಣ್ಣೆ ಹೊದಿಕೆ."

ಅಂಗಡಿಯವನು ಕೈಚಾಚಿ ಎತ್ತರವಾದ ಬೀರುವೊಂದರಿಂದ ಕೆಂಪುಬಣ್ಣದ ಹೊದಿಕೆಯೊಂದನ್ನು ತೆಗೆದಿರಿಸಿದ. "ಇದೋ, ಇದು ಬಹಳ ಚೆನ್ನಾಗಿದೆ, ತಂಬಿ. ಎರಡು ದಿನಗಳ ಹಿಂದೆ ತಾನೇ ಪಟ್ಟಣದಿಂದ ಬಂದಿತು".

ರಾಮನ್ ತನಗೆ ಸಂತೋಷವಾದುದನ್ನು ತೋರುಗೊಡದೆಯೇ ಉಣ್ಣೆಯ ಮೇಲೆ ಕೈಯಾಡಿಸಿದ. ಚೌಕಾಶಿಯ ಮೊದಲ ನಿಯಮ ಅದು.

"ಎಷ್ಟಿದು ?" ಎಂದು ಅವನು ಕೇಳಿದ.

"ಎಂಟುರೂಪಾಯಿ."

ರಾಮನ್ ಮತ್ತೆ ತನ್ನ ಅಂಗೈಯನ್ನು ಕಂಬಳಿಯ ಮೇಲೆ ಆಡಿಸಿ ಉಣ್ಣೆಯ ನೇಯ್ಗೆಯನ್ನು ಅನುಭವಿಸಿದ, ದೀರ್ಘವಾಗಿ ಉಸಿರೆಳೆದುಕೊಂಡು ದಿಟ್ಟತನದಿಂದ ಅಂಗಡಿಯವನತ್ತ ನೋಡಿ ಹೇಳಿದ. "ಅದಕ್ಕೆ ಐದು ರೂಪಾಯಿ ಕೊಡುತ್ತೇನೆ".

ಅಂಗಡಿಯವನು ದಿಟ್ಟಿಸಿ ನೋಡಿದ. "ತಮಾಷೆ ಮಾಡುತ್ತೀಯ ತಂಬಿ. ಈ ಕಂಬಳಿಗೆ ಐದು ರೂಪಾಯಿ ? ಆ ಉಣ್ಣೆ ನೋಡು, ಎಷ್ಟು ಮೃದುವಾಗಿದೆ. ಆದರೂ ಎಷ್ಟು ಭಾರವಾಗಿದೆ? ಆ ಬಣ್ಣ ನೋಡು, ಖಾತರಿಯಾದುದು. ನಿನಗಾಗಿ ಏಳು ರೂಪಾಯಿಗೆ ಕೊಡುತ್ತೇನೆ. ತಂಬಿ.

ರಾಮನ್ ತಲೆ ಅಲ್ಲಾಡಿಸಿದ. "ಐದುರೂಪಾಯಿ, ಐವತ್ತು ನಯೇ ಪೈಸೇ."

ಅಂಗಡಿಯವನು ಒಪ್ಪದೆ 'ತಂಬಿ. ನೀನು ಏನು ಹೇಳುತ್ತಿದ್ದೀಯೆಂಬುದು

ನಿನಗೇ ಗೊತ್ತಿಲ್ಲ. ಅಷ್ಟಕ್ಕೆ ಕೊಟ್ಟರೆ ನನಗೆ ನಷ್ಟ. ಆರೂವರೆ ರೂಪಾಯಿ. ಅದಕ್ಕಿಂತ ಕಡಿಮೆಗೆ ಕೊಡಲು ಸಾಧ್ಯವಿಲ್ಲ" ಎಂದ.

"ನಾನು ಕೊಡೋದು ಐದುರೂಪಾಯಿ ಎಪ್ಪತ್ತೈದು ನಯೇಪೈಸೆ. ಅದೇ ಕಡೆಯ ಮಾತು"–ರಾಮನ್ ದೃಢವಾಗಿ ಹೇಳಿದ.

"ಹೋಗಲಿ, ಎರಡೂ ಬೇಡ, ಆರು ರೂಪಾಯಿ ಕೊಟ್ಟುಬಿಡು. ನನ್ನ ಜೀವಮಾನದಲ್ಲೇ ಇಂಥ ಕಂಬಳಿಯನ್ನು ಆರು ರೂಪಾಯಿಗೆ ಕೊಟ್ಟಿದ್ದಿಲ್ಲ,"

ರಾಮನ್ ಸ್ವಲ್ಪ ಅನುಮಾನಿಸಿ "ಐದು ರೂಪಾಯಿ ತೊಂಬತ್ತೊಂದು ನಯೇಪೈಸೇ" ಅಂದ.

"ಆರು ರೂಪಾಯಿ, ತಂಬಿ. ಒಂಬತ್ತು ನಯೇಪೈಸೆ ಏನು ಲೆಕ್ಕ ?"

"ನನಗದು ಮುಖ್ಯ ಐದು ರೂಪಾಯಿ, ತೊಂಬತ್ತೊಂದು ನಯೆಪೈಸೆ" ರಾಮನ್ ಮತ್ತೆ ಹೇಳಿದ.

ಅಂಗಡಿಯವನು ತಲೆ ಹಿಂದಕ್ಕೆ ಹಾಕಿ ಜೋರಾಗಿ ನಕ್ಕ, ''ನಿಜವಾಗಿ ಚೌಕಾಸಿ ಮಾಡುತ್ತೀಯ ತಂಬಿ.ಆಗಲಿ. ಐದು ರೂಪಾಯಿ ತೊಂಬತ್ತೊಂದು ನಯೇಪೈಸೆ" ಇನ್ನೂ ನಗುತ್ತಲೇ ಅವನು ಆ ಹೊದಿಕೆಯನ್ನು ಬೂದು ಬಣ್ಣದ ಕಾಗದವೊಂದರಲ್ಲಿ ಸುತ್ತಿ ದಾರ ಕಟ್ಟಿದ.

ರಾಮನ್ ಎರಡು ರೂಪಾಯಿನ ಮೂರು ನೋಟುಗಳನ್ನಿತ್ತು ಚಿಲ್ಲರೆ ಪಡೆದ. ಒಂಬತ್ತು ನಯೇಪೈಸೆ. ಆರ್ಕಿಡ್‌ಗಳಿಂದ ತಾನು ಗಳಿಸಿದ್ದ ಒಂಬತ್ತು ರೂಪಾಯಿನಲ್ಲಿ ಪ್ರತಿ ಒಂದು ರೂಪಾಯಿಗೆ ಒಂದು ಪೈಸಾ. ತನ್ನ ಅಂಗಿಯ ತುದಿಯಲ್ಲಿದ್ದ ಗಂಟಿಗೆ ಇದನ್ನು ಸೇರಿಸಿದ. ಅಲ್ಲಿ ಒಟ್ಟು ಎಪ್ಪತ್ತೈದು ನಯೇ ಪೈಸೇ ಆಯಿತು.

ಕಂಬಳಿ ಪೊಟ್ಟಣ ಕೈಗೆತ್ತಿಕೊಂಡಿದ್ದವನು ಮತ್ತೆ ಅದನ್ನು ಕೆಳಗಿರಿಸಿ ಕಾಗದದಲ್ಲಿ ಕಂಬಳಿಯ ಕೆಂಪುಬಣ್ಣ ಸ್ವಲ್ಪ ಕಾಣುವಂತೆ ಕೈಬೆರಳಿಂದ ತೂತು ಮಾಡಿ ಪೊಟ್ಟಣವನ್ನು ಎತ್ತಿಕೊಂಡು ಬೆಟ್ಟದತ್ತ ಹೊರಟ.

ನಡೆಯುತ್ತಿದ್ದಂತೆ ಅವನು ವಾಸಂತಿ ಮತ್ತು ದಾಸನ್ ಈ ಕಂಬಳಿ ನೋಡಿದಾಗ ಹೇಗೆ ಕಾಣುವರೆಂದು ಮನದಲ್ಲೇ ಚಿತ್ರಿಸಿಕೊಂಡ. ತಾಯಿಯ ಮುಖದಲ್ಲಿ ಎಷ್ಟು ಹೆಮ್ಮೆ ಮೂಡುವುದೆಂದು ಯೋಚಿಸಿದ. ತಂದೆ ಹಿಂದಿರುಗಿ ದಾಗ ಈ ಕಂಬಳಿಯ ಕಥೆಯನ್ನು, ಅದನ್ನು ಕೊಳ್ಳಲು ಸಾಧ್ಯವಾದ ಆರ್ಕಿಡ್

ಗಳನ್ನು ಹುಡುಕಿದ ಕಥೆಯನ್ನು ಆತನಿಗೆ ಹೇಳಬೇಕು. ಮನೆಯಲ್ಲಿ ಈ ಕೆಂಪು ಬಣ್ಣ ಇಡೀ ಕೊಠಡಿಯನ್ನು ಬೆಚ್ಚಗಾಗಿಸಿ ಹೇಗೆ ಕಾಣುವುದೆಂದು ಚಿತ್ರಿಸಿಕೊಂಡ. ಪೇಟೆ ಬೀದಿಯಲ್ಲಿ ಸಾಗಿದ್ದಂತೆ ಹೊದಿಕೆಯ ಬೆಚ್ಚನೆ ಅನುಭವ ತನಗೂ ಸ್ವಲ್ಪ ಆದಂತೆ ಅವನಿಗೆ ಭಾಸವಾಯಿತು.

ಪಕ್ಕಕ್ಕೆ ತಿರುಗಿ ನೋಡದೆಯೇ ತಂಬುಸ್ವಾಮಿಯ ಅಂಗಡಿಯ ಮುಂದೆಯೇ ಹಾದು ಹೋಗುತ್ತೇನೆ ಎಂದುಕೊಂಡ ಅವನು. ಆದರೆ ಸಾಧ್ಯವಾಗದು,

ಅವನ ಕಾಲುಗಳು ತಾವಾಗಿಯೇ ಅವನನ್ನು ಅಲ್ಲಿಗೊಯ್ದುವು. ಹಿಂದೆ ಎಷ್ಟೋ ಸಲ ಮಾಡಿದ್ದಂತೆ ಆ ಗಾಜಿನ ಬೀರುವಿನ ಮುಂದೆ ನಿಂತ. ಪುಸ್ತಕ ನೋಡಿದಾಗ ಅವನಿಗೆ ಥಟ್ಟನೆ ಹೊಟ್ಟೆ ಕಿವಿಚಿದಂತಾಯಿತು, ಎಷ್ಟು ಸೊಗಸಾಗಿದೆ ಅದು! ಆ ಚಿನ್ನದ ಅಕ್ಷರಗಳು ಹೇಗೆ ಹೊಳೆಯುತ್ತಿವೆ! "ರಾಮಾಯಣ"– ತನಗೆ ತಾನೇ ಉಸಿರಿಕೊಂಡ. ಆ ಹೆಸರಿನಲ್ಲಿ ಸಂಗೀತದ ಮಾಧುರ್ಯವಿತ್ತು. ಕಾಗದ ಸುತ್ತಿದ ಪೊಟ್ಟಣವನ್ನು ಭದ್ರವಾಗಿ ಹಿಡಿದುಕೊಂಡ.

ದೀರ್ಘ ಕ್ಷಣ ಕಾಲ ರಾಮನ್ ಪುಸ್ತಕವನ್ನೇ ನೋಡುತ್ತ ನಿಂತ. ಆಮೇಲೆ ತಲೆಯೆತ್ತಿ ಪುಸ್ತಕದಂಗಡಿಯ ತಂಬುಸ್ವಾಮಿಯ ಮುಖ ನೋಡಿ "ಅದು ಸೊಗಸಾದ ಪುಸ್ತಕ, ತಾತ" ಎಂದ. ದನಿ ಪಿಸುಗುಟ್ಟುವಂತೆಯೇ ಇತ್ತು.

ವೃದ್ಧ, ಬುದ್ಧಿವಂತನಾಗಿ ಹಲವು ಸಂಗತಿಗಳನ್ನು ನೋಡಿದ್ದ ಪುಸ್ತಕದಂಗಡಿಯ ತಂಬುಸ್ವಾಮಿ ರಾಮನ್‌ನತ್ತ ನೋಡಿ ಅವನ ಕೈಯಲ್ಲಿ ಪೊಟ್ಟಣವನ್ನು ಗಮನಿಸಿದ, ಕಾಗದ ಹರಿದಿದ್ದ ಭಾಗದಿಂದ ಒಳಗಿದ್ದ ಕಂಬಳಿಯ ಕೆಂಪು ಉಣ್ಣೆ ಕಂಡಿತು.

ಈ ಮುಂಚೆ ರಾಮನ್‌ನ ಕೈಲಿದ್ದ ಆರು ರೂಪಾಯಿಗಳನ್ನು ನೋಡಿದ್ದ ತಂಬುಸ್ವಾಮಿ ವಿಷಯ ತಿಳಿದ: ಅವನ ವೃದ್ಧ ಕಣ್ಣುಗಳು ರಾಮನ್‌ನತ್ತ ನೆಟ್ಟಿದ್ದಂತೆ ಇದ್ದಕ್ಕಿದ್ದಂತೆ ಸ್ವಲ್ಪ ತೇವಗೊಂಡಂತೆ ತಂಡವು.

"ಎಂದಾದರೊಂದು ದಿನ" ರಾಮನ್ ಮೆಲ್ಲನೆ ಹೇಳಿದ, "ಎಂದಾದರೊಂದು ದಿನ, ತಾತ, ನಾನು ಆ ಪುಸ್ತಕ ಕೊಳ್ಳುತ್ತೇನೆ."

"ಎಂದಾದರೊಂದು ದಿನ ನೀನು ಹಾಗೇ ಮಾಡುತ್ತೀಯ" ಎಂದು ತಂಬುಸ್ವಾಮಿ ಹೂಗುಟ್ಟಿದ.

"ಆದರೆ ಪ್ರಾಯಶಃ ಅದು ಆಗ ಇಲ್ಲಿರುವುದೋ ಇಲ್ಲವೋ ಏನೋ ?"

"ಅದು ಇಲ್ಲೇ ಇರುತ್ತೆ, ತಂಬಿ. ಇಲ್ಲೇ ಇರುತ್ತೆ. ನಾನು ನಿನಗೆ ಭರವಸೆ ಕೊಡುತ್ತೇನೆ"–ಪುಸ್ತಕದಂಗಡಿಯ ತಂಬುಸ್ವಾಮಿ ಹೇಳಿದ.



